ಡಾ. ವೀರೇಶ ಬಡಿಗೇರ

# ರಾಶಿಬುತ್ತಿ



ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೨೧

**RASHI BUTTI**: By Dr. Veeresh Badiger, Published by Prof. A.V.Navada, Direcor, Prasaranga, Kannada University, Hampi, Vidyaranya, Kamalapura - 583 221
First Impression 1996. Rs.2-00 Pages II+34

ಮಂಟಪ ಮಾಲೆ ೨೭



ಪ್ರಕಾಶಕರು
ಎ. ವಿ. ನಾವಡ
ನಿರ್ದೇಶಕರು, ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ, ಕಮಲಾಪುರ ೫೮೩ ೨೨೧

ಬೆಲೆ: ರೂ ೨.೦೦

ಡಿ.ಟಿ.ಪಿ. ಸಂಯೋಜನೆ: ಕನ್ನಡ ವಿಶ್ವವಿದ್ಯಾಲಯ, ಹಂಪಿ

ಮುದ್ರಣ
ಅಪೂರ್ವ ಪ್ರಿಂಟರ್ಸ್
ಹೊಸಪೇಟೆ

## ೧. ಪ್ರಸ್ತಾವನೆ:

''ಸುಗ್ಗಿಯು ಬಂದಿತು ಹಿಗ್ಗನು ತಂದಿತು
ನಮ್ಮಯ ನಾಡಿನ ಜನಕೆಲ್ಲ
ಸಗ್ಗದ ಸುಖವನು ಹೀರುತ ರೈತ
ಹೊಲದಲ್ಲಿ ದುಡಿವನು ದಿನವೆಲ್ಲ''

ಈ ಹಾಡಿನ ಸಾಲುಗಳನ್ನು ಪ್ರಾಥಮಿಕ ಶಾಲೆಯಲ್ಲಿ ಗುರುಗಳು ಹೇಳಿಕೊಟ್ಟಂತೆ ಕುಣಿಕುಣಿದು ಹಾಡಿದ ನೆನಪು. ಅರ್ಥಗೊತ್ತಿರಲಿಲ್ಲ ಆಶಯ ಬೇಕಾಗಿರಲಿಲ್ಲ ಕಂಠಪಾಠ ಇಲ್ಲಿ ಮುಖ್ಯವಾಗಿತ್ತು. ಸುಗ್ಗಿಯ ಅರಿವು ದಿನಗಳೆದಂತೆ ಆಯಗಾರನಾದಂತೆ ನನ್ನ ಪಾಲಿಗೆ ಬರಹತ್ತಿತು; ಕುತೂಹಲಹೆಚ್ಚಿತು. ಸುಗ್ಗಿಯ ಭರಾಟೆ, ಸಂಭ್ರಮ, ರೈತನ ಸಾಮುದಾಯಿಕ ಚಟುವಟಿಕೆಗಳೆಲ್ಲ ನನಗೆ ಪರೋಕ್ಷ ದರ್ಶನವಾಗುವುದರೊಂದಿಗೆ ರೈತ ಬದುಕಿನ ಗಾಢ ಅನುಭವಗಳು ದಕ್ಕುವಂತೆ ಮಾಡಿದವು. ಅಂತಹ ದರ್ಶನದ ಪ್ರತಿರೂಪ ಈ ಪ್ರಯತ್ನ.

ಪ್ರತಿಯೊಂದನ್ನು ದೈವೀನೆಲೆಯಲ್ಲೇ ಪರಿಭಾವಿಸುವ ರೈತನ ಬದುಕಿನಲ್ಲಿ ಧರ್ಮಕ್ಕಿಂತ ದೇವರು ದೊಡ್ಡವನು. ಭೂಮಿ ಊಳುವುದರಿಂದ ಹಿಡಿದು ಬಿತ್ತನೆ, ಬೆಳೆ ರಕ್ಷಣೆ, ಕಾಲಕಾಲಕ್ಕೆ ಮಳೆಸುರಿದು ಬೆಳೆ ಸಮೃದ್ಧವಾಗಿರಲು ಬೆಳೆಗಳಿಗೆ ಹಾಗೂ ದನಗಳಿಗೆ ಬರುವ ರೋಗರುಜಿನಗಳನ್ನು ದೂರ್‍ಮಾಡಲು ತನ್ನ ಕುಟುಂಬಕ್ಕೆ ಯಾವುದೇ ಧಕ್ಕೆ ಬಾರದಿರಲು - ಹೀಗೆ ಒಂದೊಂದು ಕೆಲಸಗಳಿಗೆ ಒಂದೊಂದು ದೇವರನ್ನು ಸೃಷ್ಟಿಸಿಕೊಂಡು, ಸಂದರ್ಭಕ್ಕೆ ತಕ್ಕಂತೆ ಅವುಗಳ ಆರಾಧನ ವಿಧಿಗಳನ್ನು ನಿಷ್ಠೆಯಿಂದ ನಡೆಸುತ್ತ ಬಂದಿದ್ದಾನೆ. ಈ ನಿಷ್ಠೆ ಆತನ ಬದುಕಿಗೆ ಶ್ರೀರಕ್ಷೆಯಾಗಿ ಕಾಪಾಡುತ್ತ ಬಂದಿದೆ. ಹೀಗಾಗಿ ಕೃಷಿಯು ದೈವೀನೆಲೆಯಲ್ಲಿ ಬೆಳೆದುಬಂದಿತು. ರೈತ ಲಾಭ ಹಾನಿಗಳನ್ನು ತನ್ನವಾಗಿಸಿಕೊಳ್ಳದೆ ದೇವರ ಮೇಲೆ ಜಾರಿಸುತ್ತ ಕೈಗೆ ಬಂದದ್ದರಲ್ಲಿ ದಾನದಾಸೋಹ ಮಾಡುತ್ತ ಕೃತಾರ್ಥನಾದ.

ವೇದಕಾಲದಿಂದಲೂ ಕೃಷಿ ಚಟುವಟಿಕೆಗಳಲ್ಲಿ ಈ ರೀತಿಯ ಆಚರಣೆಗಳ ಉಲ್ಲೇಖ ದೊರೆಯುತ್ತವೆ. ಕೃಷಿಯನ್ನು ಪ್ರಾರಂಭಿಸುವುದಕ್ಕೆ ಮುಂಚೆ ಶುಭದಿನದಲ್ಲಿ ಭೂದೇವಿ, ಧಾನ್ಯದೇವಿ ಮತ್ತು ತ್ರಿಮೂರ್ತಿಗಳನ್ನು ಪ್ರಾರ್ಥಿಸಿ ಪೂಜಿಸಿ ದನಕರುಗಳನ್ನು ಸಿಂಗರಿಸಿ ತುಂಬ ಉತ್ಸಾಹದಿಂದ ಕೃಷಿ ಚಟುವಟಿಕೆಗಳನ್ನು ಆರಂಭಿಸುತ್ತಿದ್ದುದು ತಿಳಿದು ಬರುತ್ತದೆ.

''ಶುಭಕರಿಯಾದ ಸೀತೆಯೇ ಪ್ರತ್ಯಕ್ಷಳಾಗು ನಿನ್ನನ್ನು ಉದ್ಘೋಷಿಸುತ್ತೇವೆ. ನಮಗೆ ಫಲರೂಪದ ಕಾಣಿಕೆಗಳನ್ನು ನೀಡು. ಇಂದ್ರನು ಸೀತೆಯ ರಕ್ಷನಾಗಲಿ, ಪ್ರಶನನು ಅವಳಿಗೆ ಮಾರ್ಗದರ್ಶಕನಾಗಲಿ, ಆಕೆಯು ಸಮೃದ್ಧವಾಗಿ ಜಲವನ್ನು ಸಂರಕ್ಷಿಸಿ ಕೊಳ್ಳಲಿ ಅನಂತರ ಕ್ಷೀರಧಾರೆಯಂತೆ ನಮಗೆ ಉತ್ಪನ್ನಗಳನ್ನು ವರ್ಷೇವರ್ಷೇ ಕರುಣಿಸಲಿ'' (ಋಗ್ವೇದ iv 5.128-8)

ಭೂದೇವಿಯನ್ನು ಇಲ್ಲಿ ಸೀತೆಯೆಂದು ಕರೆಯುತ್ತಾರೆ. ಬಹುಶಃ ಜನಕರಾಜನ ಸೀತೆಯ ಹುಟ್ಟು ಇದಕ್ಕೆ ಪ್ರೇರಣೆ ನೀಡಿರಬಹುದು. ಮುನಿಕಶ್ಯಪರ 'ಕೃಷಿಸೂಕ್ತಿ'ಯಲ್ಲೂಕೂಡ ಭೂಮಿಪೂಜೆಯ ಉಲ್ಲೇಖ ಬರುತ್ತದೆ.

''ಓ ಭೂದೇವಿಯೇ ಸಮಸ್ತವನ್ನು ಧರಿಸುವ ವಿಶಾಲಿನಿಯೇ ನಿನಗೆ ನಮಸ್ಕರಿಸಿ ಕೃಷಿ ಮಾಡಲು ಹೊರಟಿದ್ದೇನೆ. ನನ್ನ ಕರ್ಮದಿಂದ ಸಂತುಷ್ಟಳಾಗು ಓ ಪವಿತ್ರಳೇ ಊಳುವುದು ಅಗೆಯುವುದು ಇತ್ಯಾದಿಗಳಿಂದ ನಿನಗೆ ಯಾವುದೇ ರೀತಿಯಿಂದ ಧಕ್ಕೆ ಮಾಡಿದರೂ ನನ್ನನ್ನು ಕ್ಷಮಿಸು. ಈ ಎಲ್ಲ ಜೀವಿಗಳು ನಿನ್ನ ಕಲೆ, ನನ್ನ ಮೇಲೆ ಕರುಣೆಯಿಟ್ಟು ಅಮಿತಭಾವವನ್ನು ನೀಡು'' ಎನ್ನುವ ಮಾತನ್ನು ಗೋವಿಂದರಾಜು ಮತ್ತು ನರಸಿಂಹೇಗೌಡ ಅವರು ತಮ್ಮ ಕೃಷಿ ತಂತ್ರಗಳು ಎಂಬ ಪುಸ್ತಕದಲ್ಲಿ ಉಲ್ಲೇಖಿಸುತ್ತಾರೆ (ಪುಟ ೩೭;೧೯೭೮)

ಮೇಲಿನ ಎರಡು ನಿದರ್ಶನಗಳು ಭೂಮಿಯನ್ನು ತಾಯಿಯಾಗಿ, ಮನುಷ್ಯಳನ್ನಾಗಿ ಮಾನವೀಯ ಸಂವೇದನೆಗಳಿಂದ ಗ್ರಹಿಸಲಾಗಿದೆ. ಊಳುವುದು, ಅಗೆಯುವದು ಮಾಡುವುದರಿಂದ ಪ್ರಜ್ಞಾಪೂರ್ವಕ ಅಥವಾ ಅಪ್ರಜ್ಞಾಪೂರ್ವಕವಾಗಿಯೋ ಭೂತಾಯಿಗೆ ನೋವಾದರೆ ಅವಳು ಮುನಿಸಿಕೊಂಡಾಳೆಂಬ ಭೀತಿಯಿದೆ ಕಾಳಜಿ ಇದೆ. ಯಾಕಂದರೆ ಕೊಡುವ ತಾಯಿಯೇ ಮುನಿದರೆ ಮುಗಿದೇ ಹೋಯಿತು. ಬದುಕು ಹಾಹಾಕಾರ ಈ ಕಾರಣಕ್ಕಾಗಿ ಅವಳಿಗೆ ನೋವಾಗದಂತೆ ಅಥವಾ ನೋವಾದರೆ ಅದನ್ನು ಮನ್ನಿಸುವಂತೆ ಪೂಜೆ, ಪುನಸ್ಕಾರ ಬಲಿ, ಇತ್ಯಾದಿ ರಿಚ್ಯುವಲ್ಲುಗಳನ್ನು ನಡೆಸುವುದು ರೂಢಿಯಾಗಿದ್ದುದು ಕಂಡುಬರುತ್ತದೆ.

ಈ ರೀತಿ ಭೂಮಿ ತಾಯಿಯಾಗಿ, ದೇವಿಯಾಗಿ, ರೈತರು ಅವಳ ಮಕ್ಕಳಾಗಿ, ಬಿತ್ತುವ, ಬೆಳೆಯುವ, ಕೊಯ್ಲುಮಾಡುವ, ಗೂಡು ಬಡಿಯುವ, ತೆನೆ ಮುರಿಯುವ, ಕಣಮಾಡುವ

ತೆನೆ ತುಳಿಸುವ, ತೂರುವ, ಅಳೆಯುವ, ಪ್ರತಿಯಾಗಿ ಪೂಜಿಸುವ ಕೆಲಸವನ್ನು ಮಾಡುತ್ತ ಬಂದಿರುವುದು ಸಂಪ್ರದಾಯ.

**೨. ರಾಶಿಬುತ್ತಿಯ ಪರಿಕಲ್ಪನೆ:**

ಮೇಲೆ ಸೂಚಿಸಿದಂತೆ ಉಳುಮೆ, ಬಿತ್ತಿಗೆ, ಬೆಳೆಸಂರಕ್ಷಣೆ, ವ್ಯವಸಾಯದ ಒಂದು ಹಂತವಾದರೆ, ಕೊಯ್ಲು, ಗೂಡುಬಡಿಯುವುದು, ತೆನೆಮುರಿಯುವುದು, ರಾಶಿ ಮಾಡುವುದು, ರಾಶಿಮನೆಗೆ ತರುವುದು ಇದು ಮತ್ತೊಂದು ಹಂತವಾಗಿದೆ. ಪ್ರತಿಹಂತವೂ ತುಂಬಾ ಮಹತ್ವದ್ದು. ಯಾವುದನ್ನೂ ಕೃಷಿಕ ಉಪೇಕ್ಷೆ ಮಾಡುವುದಿಲ್ಲ. ಬದುಕಿನ ವರ್ಷಾವರ್ತನದ ಸಂಗತಿಗಳು ಇವಾಗಿರುವುದರಿಂದ ಪ್ರತಿಯೊಂದು ಹೆಜ್ಜೆಯನ್ನು ಎಚ್ಚರಿಕೆಯಿಂದ ಭಯಭಕ್ತಿಯಿಂದ ಮುಂದಿಡುತ್ತಾನೆ.

ಪ್ರಸ್ತುತ ಪ್ರಬಂಧದಲ್ಲಿ ಕೃಷಿಯ ಎರಡನೇ ಭಾಗಕ್ಕೆ ಹೆಚ್ಚು ಒತ್ತು ಕೊಡಲಾಗಿದೆ. ರಾಶಿಬುತ್ತಿಯ ಕ್ರಿಯೆ ಆರಂಭವಾಗುವುದೇ ಕೊಯ್ದು ಗೂಡುಹಾಕಿದ, ಗೂಡನ್ನು ಪೂಜೆಮಾಡಿ ತೆನೆ ಮುರಿಯುವ ಪ್ರಕ್ರಿಯೆಯೊಂದಿಗೆ.

**ತೆನೆ ಮುರಿಯುವುದು :**

ಒಳ್ಳೆಯ ಮಹೂರ್ತದಲ್ಲಿ ಹೊಲಕ್ಕೆ ಹೋಗಿ ಗೂಡಿನ ಪೂರ್ವದಿಕ್ಕಿಗೆ ಐದು ಸಿವುಡುಗಳನ್ನು ಗೂಡಿನಿಂದ ಹೊರಗೆಳೆಯುತ್ತಾರೆ. ಅದನ್ನು ಗೂಡಿಗೆ ಹೊಂದಿಕೊಡಂತೆ ಬಾಗಿಲು ಚೌಕಟ್ಟಿನಾಕಾರದಲ್ಲಿ ಜೋಡಿಸುತ್ತಾರೆ. ಈ ಚೌಕಟ್ಟಿನ ಕೆಳಗೆ ಐದು ಕಲ್ಲುಗಳನ್ನಿಟ್ಟು ಪೂಜೆ ಮಾಡುತ್ತಾರೆ. ಮನೆಯಿಂದ ಕುಡಿಕೆಯಲ್ಲಿ ಮಾಡಿಕೊಂಡು ಬಂದ ಅನ್ನ ಮತ್ತು ಶ್ಯಾವಿಗೆ ಮಿಶ್ರಿತ ಅಂಬಲಿಯನ್ನು ಎಡೆ ಹಿಡಿಯುತ್ತಾರೆ. ಆ ಮೇಲೆ ಅದರಲ್ಲಿ ಐದು ತೆನೆಗಳನ್ನು ಮುರಿದು ಮೊದಲು ಮಾಡುತ್ತಾರೆ. ಈ ಐದು ತೆನೆಗಳನ್ನು ಮನೆಗೆ ತರುತ್ತಾರೆ. ತಂದು ಅದನ್ನು ಜೋಪಾನವಾಗಿ ಜಂತಿಗೆ ಕಟ್ಟುತ್ತಾರೆ. ಮುಂದಿನ ವರ್ಷದ ಬಿತ್ತುವ ಬೀಜದಲ್ಲಿ ಇವನ್ನು ಕೂಡಿಸಿ ಬಿತ್ತುತ್ತಾರೆ. ಇದರಿಂದ ಫಲ ಸಮೃದ್ಧವಾಗಿ ಬರುತ್ತದೆನ್ನುವ ವಾಡಿಕೆ ಇದೆ.

ಅಕಸ್ಮಾತ್ ಆಳುಕಾಳುಗಳು ಲಭ್ಯವಾದರೆ ಗೂಡುಪೂಜೆಯ ದಿನವೇ ತೆನೆ ಮುರಿಯುವ ಕೆಲಸ ಆರಂಭಿಸಿಬಿಡುತ್ತಾರೆ. ಒಂದು ಕಡೆ ಕಣ ಮಾಡುವುದು ನಡೆದರೆ ಮತ್ತೊಂದೆಡೆ ತೆನೆ ಮುರಿಯುವ ಕ್ರಿಯೆಗಳು ನಡೆಯುತ್ತವೆ. ಮುರಿದ ತೆನೆಯನ್ನು, ಮಾಡಿದ ಕಣದಲ್ಲಿ ತಂದು ಸುರಿಯುತ್ತಾರೆ. ತೆನೆಮುರಿಯುವಾಗ ಕುಡುಗೋಲು ಪೂಜೆಯೆಂದು ನಡೆಯುತ್ತದೆ. ಮಠಪತಿಯಾದವನು ಹೊಲಕ್ಕೆ ಬಂದು ಮುರಿಯುತ್ತಿರುವ ಎಲ್ಲರ ಕೈಯಲ್ಲಿರುವ ಕುಡುಗೋಲಿಗೆ ವಿಭೂತಿ ಹಚ್ಚುತ್ತಾನೆ. ಪ್ರತಿಯಾಗಿ ಅವರೆಲ್ಲರೂ

ಎರಡು ಅಥವಾ ಐದು ತೆನೆಗಳನ್ನು ಅಯ್ಯನ ಜೋಳಿಗೆಗೆ ಎರಡುಬಾರಿ ಹಾಕುತ್ತಾರೆ. ಆ ಮೇಲೆ ಆತನ ಕಾಲಿಗೆ ನಮಸ್ಕರಿಸುತ್ತಾರೆ. ತೆನೆ ಮುರಿಯುವವರು ಸಾಮಾನ್ಯವಾಗಿ ಹೆಂಗಸರೆ ಆಗಿರುತ್ತಾರೆ. ವಿಭೂತಿ ಹಚ್ಚಲು ಹೆಣ್ಣಿಗೆ ಅವಕಾಶವಿಲ್ಲ. ಗಂಡಸೆ ಅದನ್ನು ಮಾಡಬೇಕೆನ್ನುವ ನಿಯಮ ಇದೆ. ಈಗ ಈ ನಿಯಮದಲ್ಲಿ ಸಡಿಲತೆಯನ್ನು ಕಾಣಬಹುದಾಗಿದೆ.

ತೆನೆ ಮುರಿಯುವ ಹೆಣ್ಣುಮಕ್ಕಳ ಕುಡುಗೋಲಿಗೆ ವಿಭೂತಿ ಹಚ್ಚಿದ ಮೇಲೆ ಇಕ್ಕಲಿಹಾಕುವವನಿಗೆ ವಿಭೂತಿ ಹಚ್ಚುತ್ತಾನೆ. ಆತ ಕೇವಲ ಕಾಲಿಗೆ ಬೀಳುತ್ತಾನೆ. ಈ ಸಂದರ್ಭದಲ್ಲಿ ತೆನೆಹಾಕುವ ಕುರಿತು ಮಾಲೀಕನ ಮರ್ಜಿಗೆ ಕಾಯಬೇಕಿಲ್ಲ. ಬದಲಾಗಿ ರಾಶಿ ಹೆಚ್ಚಕಲಾಗುತ್ತದೆನ್ನುವ ಭಾವನೆ ಗಾಢವಾಗಿದೆ.ಇಷ್ಟಾದ ಮೇಲೆ ತೆನೆ ಮುರಿಯುವುದು ಸಂಜೆ ಹೊತ್ತಿಗೆ ಮುಗಿಯುತ್ತಿದ್ದಂತೆ ಆಯಗಾರರು ತೆನೆ ದಾನಕ್ಕೆ ಬರುತ್ತಾರೆ.

**ಕಣ ಮಾಡುವುದು :**

ಕಣ ಮಾಡುವ ಕೆಲಸ ಕೂಡ ಮಂಗಳವಾರ ಮತ್ತು ಶುಕ್ರವಾರಗಳಂತಹ ಶುಭ ಮಹೂರ್ತಗಳಲ್ಲಿ ಆರಂಭವಾಗುತ್ತದೆ. ಕಣವನ್ನು ಬನ್ನಿಚಟ್ಟಿ ಅಥವಾ ಬನ್ನಿ ಗಿಡ ಇರುವ ಸಮಪಾತಳಿಯಾದ ಹಾಗೂ ಗೂಡಿಗೆ ಸಮೀಪವಾದ ಸ್ಥಳದಲ್ಲಿ ಮತ್ತು ಬಿರುಸಾದ ನೆಲ ಇರುವಲ್ಲಿ ಮಾಡುವುದುಂಟು. ಈ ಎಲ್ಲ ಅಂಶಗಳನ್ನು ಗಮನದಲ್ಲಿಟ್ಟುಕೊಂಡೇ ಬೆಳೆಕಟಾವು ಮಾಡುವಾಗ ಆಲೋಚಿಸಿ ಗೂಡು ಬಡಿಯುತ್ತಾರೆ.

ಕಣಮಾಡುವ ಜಾಗದಲ್ಲಿ ಮೊದಲು ಚಿಕ್ಕಚಿಕ್ಕ ಐದು ಮಣ್ಣಿನ ಗುಂಪಿಗಳನ್ನು ಮಾಡಿ ಅವುಗಳಿಗೆ ಅರಿಶಿನ ಕುಂಕುಮ ಹಚ್ಚಿ ಎಡೆಹಿಡಿಯುತ್ತಾರೆ. ಪೂಜೆಗೆ ಅನುವಾಗುವಂತೆ ಬನ್ನಿ ಕಂಟಿಯನ್ನು(ಗಿಡ) ಮುಂದೆ ಮಾಡಿಕೊಂಡು ಹಿಂದೆ ಕಣವನ್ನು ಮಾಡುತ್ತಾರೆ. ಶ್ರವಣ, ಪುಷ್ಯ, ನಕ್ಷತ್ರಗಳು ಕಣಮಾಡುವ ಪ್ರಶಸ್ತ ದಿನಗಳು.

ಪೂಜೆಯಾದ ಮೇಲೆ ಕಣಕ್ಕೆ ಬೇಕಾಗುವಷ್ಟು ಜಾಗದಲ್ಲಿಯ ಮೇಲ್ಮಣ್ಣನ್ನು ಸಲಿಕೆಯಿಂದ ಕೆದರಿ ಸ್ವಚ್ಛಗೊಳಿಸುತ್ತಾರೆ. ತೆಗೆದ ಮಣ್ಣನ್ನು ನಾಲ್ಕು ದಿಕ್ಕಿಗೆ ನಾಲ್ಕು ಗುಂಪಿಗಳನ್ನಾಗಿ ಹಾಕುತ್ತಾರೆ. ಗಟ್ಟಿನೆಲ ಸಿಕ್ಕ ಮೇಲೆ ನೀರು ಹೊಡೆದು ಕಡೆಗಾನ ಕಟ್ಟುತ್ತಾರೆ. ಕಡೆಗಾನ ಎಂದರೆ ನಾಲ್ಕಾರು ಎತ್ತಿನಿಂದ ಕಣದ ಜಾಗವನ್ನು ನುಣ್ಣಗೆ ತುಳಿಸುತ್ತಾರೆ. ಎತ್ತಿನ ಗೊರಸಿನ ತುಳಿತದಿಂದಾಗಿ ನೆಲ ಇನ್ನಷ್ಟು ಗಟ್ಟಿಗೊಳ್ಳುತ್ತದೆ. ಮರುದಿನ ಹುಲ್ಲುಗಾಡಿ ಇಲ್ಲವೆ ಕುರಿಯ ಹಿಕ್ಕೆಯನ್ನು ಕಣದ ತುಂಬ ಒಗೆದು ಮತ್ತೊಮ್ಮೆ ಎತ್ತಿನಿಂದ ತುಳಿಸುತ್ತಾರೆ. ಇಷ್ಟೊತ್ತಿಗೆ ಕಣ ಒಂದು ಹದಕ್ಕೆ ಬಂದಿರುತ್ತದೆ. ಆ ಮೇಲೆ ಮತ್ತೆ ಸಗಣಿಯಿಂದ ಸಾರಿಸುತ್ತಾರೆ.

ಹೀಗೆ ಕಣ ರೂಪಗೊಂಡ ದಿನವೇ ತೆನೆ ಮುರಿಯುವ ಕ್ರಿಯೆ ಆರಂಭವಾಗುತ್ತದೆ. ಕಣ ಮಾಡಿ ಬಹಳ ದಿವಸ ಹಾಗೆಯೇ ಬಿಡುವುದಿಲ್ಲ. ಬಿಟ್ಟರೆ ಕಣ ಗಾಳಿ ಬಿಸಿಲಿನಿಂದಾಗಿ ಒಡೆದು ಹರಳು ಹರಳು ಆಗುತ್ತದೆ. ಹೀಗಾಗಿ ಸಾರಿಸಿದ ಸೆಗಣಿ ಸಂಪೂರ್ಣವಾಗಿ ಒಣಗುವುದರ ಹಿಂದೆಯೇ ತೆನೆ ತಂದು ಕಣಕ್ಕೆ ಸುರಿಯುತ್ತಾರೆ. ತೆನೆ ತರುವುದು ಮುಗಿದ ತಕ್ಷಣ ಕಣದ ಸುತ್ತ ನೊಂಡ ಕಣಿಕಿಯಿಂದ ಇಂಡಿಕಟ್ಟುತ್ತಾರೆ. ಐದೈದು ಸಿವುಡಿನಂತೆ ಪೆಂಡಿಕಟ್ಟಿ ಕಣದ ಸುತ್ತಲು ಒಂದಕ್ಕೊಂದು ಸೇರುವಂತೆ ಇಟ್ಟು ಸರ್ಕಲ್ ನಿರ್ಮಿಸುತ್ತಾರೆ. ಇದರಿಂದ ಕಾಳು ಕಣದ ಹೊರಗೆ ಸಿಡಿಯುವುದಾಗಲಿ ಹೊರಗಿನ ಹೊಲಸು, ರಾಶಿಯಲ್ಲಿ ಬಂದು ಸೇರುವುದಾಗಲಿ ತಪ್ಪಿಹೋಗುತ್ತದೆ.

**ಮೇಟಿಕಂಬ :**

ಕಣದಲ್ಲಿ ಮೇಟಿಕಂಬ ಬಹಳ ಪ್ರಧಾನವಾದದ್ದು ರಾಶಿಯ ಇಡೀ ಸಂದರ್ಭದ ಕೇಂದ್ರ ಬಿಂದುವಾದಂತೆ ಸಮೃದ್ಧಿಯ ಸಂಕೇತವು ಅಹುದು. ಮೇಟಿಯನ್ನು ಕಣಕ್ಕೆ ತೆನೆ ಹಾಕುವ ಮೊದಲು ಅಥವಾ ಹಾಕಿದ ಮೇಲೆ ನಡೆಸುತ್ತಾರೆ. ತೆನೆ ಹಾಕುವಾಗ ಮೇಟಿಯ ಜಾಗವನ್ನು ಬಿಟ್ಟು ಸುತ್ತಲೂ ಹಾಕುತ್ತಾರೆ. ಮೇಟಿಕಂಬ 'ಬನ್ನಿ' ಮತ್ತು 'ಆರಿ'ಯ ಮರದ್ದಾಗಿರುತ್ತದೆ. ಬೇರೆ ಮರ ಹಾಕುವುದು ಬಹಳ ಕಡಿಮೆ. ಪ್ರಾದೇಶಿಕತೆಯ ಮೇಲೂ ಇದು ಅವಲಂಬಿತವಾಗಿದೆ. ಹೆಚ್ಚಾಗಿ ಪೂಜಾರ್ಹವಾದ ಮರದ ಕೊಂಬೆಗಳನ್ನೇ ಮೇಟಿಕಂಬವಾಗಿ ನೆಡೆಸುತ್ತಾರೆ. ಇದು ಆರು ಅಡಿ ಉದ್ದ ಇದ್ದು ೧೦ ರಿಂದ ೧೨ ಇಂಚು ದಪ್ಪವಾಗಿದ್ದು ಮೇಲೆ ಕವಲಾಗಿರುತ್ತದೆ. ಇದರಿಂದಾಗಿ ಕವಲಿಗೆ ಕಂಬಳಿ, ಹಂತಿಕಣ್ಣಿ ಹಾಕಲು ಅನುಕೂಲವಾಗುತ್ತದೆ.

ಒಂದರಿಂದ ಒಂದುವರೆ ಅಡಿ ಉದ್ದದ ಕುಣಿತೆಗೆದು ಈ ಮೇಟಿಯನ್ನು ನೆಡುತ್ತಾರೆ. ಮೇಟಿಕುಣಿಯ ಮಣ್ಣನ್ನು ಹತ್ತಿರದ ರಸ್ತೆಗೆ ಅಡ್ಡವಾಗಿ ಐದು ಸಣ್ಣಸಣ್ಣ ಗುಂಪುಗಳನ್ನಾಗಿ ಸುರಿಯುತ್ತಾರೆ. ಇದು ರೈತನ ಸಂವಹನ ಮಾಧ್ಯಮವಾಗಿ ಕೆಲಸಮಾಡುತ್ತದೆ. ಸಂವಹನ ಮಾಧ್ಯಮಗಳಿಲ್ಲದ ದಿನದಲ್ಲಿ ಇಂದಿನ ಸುಸ್ವಾಗತ ಬೋರ್ಡಿನಂತೆ ಈ ಮಣ್ಣುಗುಂಪಿಗಳು ಕೆಲಸ ಮಾಡುತ್ತಿದ್ದವು. ಆದರೆ ಈ ಸುಸ್ವಾಗತ ಬೋರ್ಡಿಗಿಂತ ಭಿನ್ನವಾದ ಮತ್ತು ಗಂಭೀರವಾದ ಅರ್ಥ ಈ ಮಣ್ಣು ಗುಂಪಿಗಳಿಗಿದೆ. ಈ ಮೂಲಕ ರೈತ ಹಂಚಿತಿನ್ನುವ ಪ್ರಕ್ರಿಯೆಯನ್ನು ಗ್ರಹಿಕೆಗೆ ತರುತ್ತಾನೆ. ಹೊಲದ ರಾಶಿಯನ್ನು ಯಾರಿಗೂ ಗೊತ್ತಾಗದಂತೆ ಕಳ್ಳತನದಿಂದ ತರದೇ ಬೆಳೆದದ್ದರಲ್ಲಿ ಬಡಬಗ್ಗರಿಗೆ ಬಾಬದವರಿಗೆ ಜೋಗಿ ಜಂಗಮರಿಗೆ ಹಂಚಿ ಉಳಿದದ್ದನ್ನು ಮನಗೆ ತರುವ ದಾಸೋಹದ ರೀತಿಯನ್ನು, ರೈತನ ದೊಡ್ಡತನವನ್ನು ಈ ಗುಂಪಿಗಳು ಅರ್ಥೈಸುತ್ತವೆ. ಮಣ್ಣುಗುಂಪಿ ಗಮನಿಸಿದ ದಾರಿಕಾರರು ಆಯಗಾರರು ಹೋ! ಸಮೀಪದಲ್ಲಿ ರಾಶಿ ನೆಡೆಯುತ್ತಿದೆ ಎಂದು ತಿಳಿದು ಕಣಕ್ಕೆ ಬಂದು ದಾನ ಪಡೆದುಕೊಳ್ಳುತ್ತಾರೆ.

ಸುಮಾರು ೫೦-೬೦ ವರ್ಷಗಳ ಹಿಂದೆ ಶಾಶ್ವತ ಮೇಟಿಗಳಿದ್ದದ್ದು ತಿಳಿದು ಬರುತ್ತದೆ. ಶಾಶ್ವತ ಮೇಟಿಗೆ ತರೀಮರದ ತುಂಡನ್ನು ಬಳಸಲಾಗುತ್ತಿತ್ತು. ಶಾಶ್ವತ ಮೇಟಿಗಳು ಸುಮಾರು ಹತ್ತು ವರ್ಷಗಳವರೆಗೆ ಏನೂ ಆಗುತ್ತಿರಲಿಲ್ಲ. ರೂಳುಕಲ್ಲುಗಳು ಬಂದ ಮೇಲೆ ಈ ಮೇಟಿಯ ಪ್ರಭಾವ ಬಹಳ ಕಡಿಮೆಯಾಯಿತು ಎಂದು ಎಂ.ಜಿ. ಈಶ್ವರಪ್ಪ ಅಭಿಪ್ರಾಯ ಪಡುತ್ತಾರೆ. (೧೪೩;೧೯೯೫) ಈ ಕಾರಣದಿಂದಾಗಿ ಹಲವಾರು ಆಚರಣೆಗಳು ಮೊಟಕುಗೊಂಡದ್ದು ಎದ್ದು ಕಾಣುತ್ತದೆ.

ಹೀಗೆ ರೈತ ಹೊಲಗೆಲಸ ಕಾಯಕದಲ್ಲಿ ಸುಗ್ಗಿ ದಾಸೋಹ ಹರಸೇವೆಯಲ್ಲಿ ಹಂಗಿಲ್ಲದ ಒಕ್ಕಲುತನದಲ್ಲಿ ನಿರತವಾಗುತ್ತಾನೆ. ಪ್ರಕೃತಿಯ ಮುತುವರ್ಜಿಗಾಗಿ ಹಲವಾರು ವಿಧಿಕ್ರಿಯೆಗಳನ್ನು ರೂಢಿಸಿಕೊಳ್ಳುತ್ತಾನೆ.

ಒಕ್ಕಲುತನದ ಉದ್ದೇಶವೇ ಹಂಚಿಉಣ್ಣುವುದು. ಒಂದು ತ್ರಿಪದಿಯಿಂದ ಇದನ್ನು ಸ್ಪಷ್ಟಪಡಿಸಿಕೊಳ್ಳಬಹುದು.

ಕಡೆಯ ಬಲಕಿನತಾಳ ಎಡೆಯಾಯ್ತು ಅರಸನಿಗೆ
ಎಡೆಗಡೆಯ ತಾಳ ಪಶುಪಕ್ಷಿ । ಜೀವನಕೆ
ನಡುವಿನ ತಾಳ ರೈತನಿಗೆ

ಇದೂ ಅಲ್ಲದೆ "**ಒಂದು ತಾಳದ ಬೆಳೆಯ ಬಂದವರಿಗಿಲ್ಲೆನ್ನೆ ಮುಂದು ಕೊಡುಗೈಯ ಒಕ್ಕಲಿಗ**" ಎನ್ನುವಲ್ಲಿ ಉತ್ಪಾದನೆಯ ಒಂದು ಭಾಗಮಾತ್ರ ಉತ್ಪಾದಕನಿಗೆ ಸಲ್ಲುತ್ತದೆ. ಉಳಿದ ಮೂರು ಭಾಗ ಕರತೆರಿಗೆ ದಾನಧರ್ಮ ಪಶುಪಕ್ಷಿಗೆ ದಕ್ಕುತ್ತದೆ. ಹೀಗೆ ಉತ್ಪಾದನೆಯ ಬಹುಭಾಗ ಪರೋಪಕಾರಕ್ಕೆ ಬಳಕೆಯಾಗುವುದು ಶರಣರ ಕಾಯಕ ತತ್ತ್ವದ ಮಹತ್ವವನ್ನು ಎತ್ತಿಹೇಳುವಂತಹದಾಗಿದೆ. ಜೊತೆಗೆ ಮನುಷ್ಯನ ಸಾಮುದಾಯಿಕ ಪ್ರವೃತ್ತಿಗಳನ್ನು ಎತ್ತಿ ತೋರಿಸುವುದೂ ಆಗಿದೆ.

**ಹಂತಿ :**

ಈ 'ಹಂತಿ' ಪದವು 'ಪಂಕ್ತಿ', 'ಸಾಲು' ಎನ್ನುವುದರಿಂದ ಬಂದದ್ದಾಗಿದೆ. ಮೇಟಿಯ ಎರಡೂ ಬಧಿಗೆ ಎತ್ತುಗಳನ್ನು ಸಾಲಾಗಿ ಕಟ್ಟಿ ತೆನೆತುಳಿಸುವ ಕ್ರಮ ಈ ಪಂಕ್ತಿಯ ಸ್ಪಷ್ಟ ವ್ಯಾಖ್ಯಾನವನ್ನು ಮಾಡುತ್ತದೆ. ಕಣದ ತುಂಬ ತೆನೆಗಳನ್ನು ಹರಡಿದ ಮೇಲೆ ಹಂತಿಯನ್ನು ಕಟ್ಟುತ್ತಾರೆ. ಹಂತಿಯಲ್ಲಿ ಎತ್ತಿನ ಬಳಕೆ ಬಹಳ ಪ್ರಧಾನವಾದದ್ದು. ಕ್ವಚಿತ್ತಾಗಿ ಬಡ್ಡದನಗಳನ್ನು ಹಂತಿಗೆ ಬಳಸುತ್ತಾರೆ. ಉತ್ತರಕರ್ನಾಟಕದಲ್ಲಿ ಮಾತ್ರ ಎತ್ತು ಹೋರಿಗಳನ್ನು ಹಂತಿಗೆ ಬಳಸುತ್ತಾರೆ. ಹಂತಿರಾಶಿಯಲ್ಲಿ ಮುಂಗಾರಿಜೋಳ, ಬಿಳಿಜೋಳ ಬಹಳ ಪ್ರಧಾನವಾದಂತವು. ನಂತರದಸ್ಥಾನ ಗೋದಿ ರಾಶಿಯದು ಮತ್ತು

ಸಜ್ಜಿರಾಶಿಯದ್ದು. ಈ ರಾಶಿಗಳೆಂದರೆ ಹಂತಿಂತ ರಾಶಿಗಳಲ್ಲ ನೂರು ಚೀಲ ಇನ್ನೂರು ಚೀಲದ ರಾಶಿ. ನೂರು ಎತ್ತುಗಳು ತುಳಿದು ಮಾಡುವ ರಾಶಿಗಳಿದ್ದ ಬಗ್ಗೆ ಬೆಣ್ಣೂರಿನ ಮಲ್ಲಪ್ಪ ಗುಡದಿನ್ನಿ (೬೦) ತುಂಬ ಉತ್ಸಾಹದಿಂದ ಹೇಳುತ್ತಾರೆ. ಇಂತಹ ರಾಶಿಗೆ ತಿಂಗಳ ಗಂಟಲೇ ತಮ್ಮ ಎತ್ತು ಬಂಡಿಗಳ ಸಮೇತ ಬೀಗರು ಬಿಜ್ಜರು ಸ್ನೇಹಿತರು, ಮುಯ್ಯಕಾರರು ಭಾಗಿಗಳಾಗುತ್ತಿದ್ದರಂತೆ. ಹಿಂದೆ ಸೂಚಿಸಿದಂತೆ ಹಂತಿ ಎಂದರೆ ಮೇಟಿಕಂಬ ಕೇಂದ್ರವಾಗಿ, ಎತ್ತುಗಳು ಅದರ ಸುತ್ತಲು ಸುತ್ತುವ ರೀತಿ. ಸರಳವಾಗಿ ಹೇಳುವುದಾದರೆ ತೆನೆಯಿಂದ ಕಾಳನ್ನು ಬೇರ್ಪಡಿಸುವ ವಿಧಾನ. ಎತ್ತುಗಳು ಸುತ್ತುವಾಗ ಅವುಗಳ ಗೊರಸಿಗೆ ಸಿಕ್ಕು ಕಾಳುಗಳು ತೆನೆಯಿಂದ ಬೇರ್ಪಡುತ್ತವೆ. ಹಂತಿಗೆ ಹಳೆಯ ಎತ್ತನ್ನೇ ಮೇಟಿಗೆ (ಬಡ್ಡಿಗೆ) ಕಟ್ಟುತ್ತಾರೆ. ಇಲ್ಲಿ ಒಂದು ವಿಶಿಷ್ಟ ತಂತ್ರವಿದೆ. ಎತ್ತಿನ ಗುಣಧರ್ಮವನ್ನು ಅವಲಂಬಿಸಿ ಅವುಗಳನ್ನು ಕ್ರಮವಾಗಿ ಕಟ್ಟುವುದೇ ಅದು. ಒಂದು ಹಂತಿ ಹಾಡಿನಲ್ಲಿ

ಹಂಡ ಹವಳನ ಕಟ್ಟು ಗುಂಡಗುಳ್ಯಾಗ ಕಟ್ಟು
ಮಾಲಿಂಗನ ಕಟ್ಟು ಮೇಟ್ಯಾಗ। ನಮ್ಮೆತ್ತ
ಕಾಡಿದರೆ ಕಟ್ಟೋ ಕಡಿಸುತ್ತ ೧

ಕೃಷಿ ಬದುಕಿನ ಅವಿಭಾಜ್ಯ ಅಂಗವಾದ ಬಸವನಿಗೆ ಗೌರವ ಕೊಡುವ ರೀತಿ ಅದ್ಭುತ. ರೈತ ತನ್ನಂತೆ ಅವಕ್ಕೂ ಒಂದೊಂದು ಹೆಸರು ಕೊಟ್ಟುಕೊಂಡಿದ್ದಾನೆ (ಗೂಳ್ಯಾ. ಮಾಲಿಂಗ, ಹವಳ, ಸಾರಂಗ, ಇತ್ಯಾದಿ) ಗೌರವದ ಜೊತೆಗೆ ಅವನ್ನು ಗುರುತಿಸುವ ರೀತಿ ಇಲ್ಲಿನದಾಗಿದೆ. ಕ್ರಮವರಿತ ಬಾಳು ಕೃಷಿಕನದು. ಮೇಟಿಗೆ ಕಟ್ಟುವ ಎತ್ತುಗಳು ಹೆಚ್ಚಾಗಿ ಹಳೆಯ ಮತ್ತು ನಡುವಯಸ್ಸಿನವುಗಳು. ಇದಕ್ಕೆ ಪ್ರಬಲ ಕಾರಣವಿದೆ. ಹಳೆ ಎತ್ತುಗಳ ಹೆಜ್ಜೆ ಕುಂತಿರುವುದರಿಂದ ದಡಬಡ ನಡೆಯಲಾಗುವುದಿಲ್ಲ ಹಾಗಂತ ಅವನ್ನು ಬಿಡಲಾಗುವುದಿಲ್ಲ. ಮೇಟಿಗೆ ಹತ್ತಿರವಿರುವುದರಿಂದ ಕೊನೆ ಎತ್ತು ಎರಡು ಸುತ್ತು ಸುತ್ತಿ ಬಂದರೆ ಬಡ್ಡಿಯ ಎತ್ತು ಒಂದೇ ಸುತ್ತು ಸುತ್ತಿದಂತಾಗುತ್ತದೆ. ಸಾಮಾನ್ಯವಾಗಿ ಒಂದು ಚಕ್ರದ ಗತಿಯನ್ನು ಗಮನಿಸಿದರೆ ಇದರ ಸ್ಪಷ್ಟ ಅರ್ಥಬರಬಹುದು. ತಿರುಗುವ ಚಕ್ರದಲ್ಲಿ ಅದರ ತುದಿಗಿರುವ ವೇಗ ಅದರ ಕೇಂದ್ರಬಿಂದುವಿನಲ್ಲಿರುವುದಿಲ್ಲ. ಅಲ್ಲಿ ಅದರ ವೇಗ ಕಡಿಮೆಯಾಗಿರುತ್ತದೆ. ಹಾಗೆ ಹಂತಿಯಲ್ಲೂ ಆಗುತ್ತದೆ. ಇದರಿಂದ ಹಳೆಯ ಎತ್ತಿಗೆ ಆಯಾಸವಾಗುವುದಿಲ್ಲ ಆದರೆ ಹರೆಯದ ಹೋರಿ ಈ ಆಯಾಸವನ್ನು ನಡಿಗೆಯ ವೇಗವನ್ನು ನಿಯಂತ್ರಿಸಿಕೊಳ್ಳಬಲ್ಲದು ಎನ್ನುವ ತರ್ಕ ಇಲ್ಲಿದೆ. ಇದೂ ಅಲ್ಲದೆ ಹಳೆಯ ಎತ್ತಿಗೆ ಇದೂವರೆಗೆ ಹಂತಿತುಳಿದ ಅಭ್ಯಾಸವಿರುತ್ತದೆ. ಈ ಅಭ್ಯಾಸಬಲ ತಾನೂ ತುಳಿಯುತ್ತ ಉಳಿದ ಎತ್ತುಗಳನ್ನು ನಿಯಂತ್ರಿಸಲು ಸಹಕರಿಸುತ್ತದೆ. ಈ ಮೂಲಕ ಈ ರಿಂಗ್ ಮಾಸ್ಟರ್ ಹಂತಿಯನ್ನು ಸುಗಮ ಮಾರ್ಗದಲ್ಲಿ, ಒಂದು ಅನುಕ್ರಮದಲ್ಲಿ ನೆಡೆಸಿ ಕೊಡುತ್ತಾನೆ. ಒಂದು ವೇಳೆ ಹಳೆಯ ಎತ್ತಿನ ಬದಲಿಗೆ ಹರೆಯದ ಹೋರಿಯನ್ನೇನಾದರೂ

ಹಾಕಿದ್ದೇಯಾದರೆ ಹಂತಿಯನ್ನು ನಿಯಂತ್ರಿಸಲಾಗದೆ ಚೆಂಗ್ಯಾಮಂಗ್ಯಾನಂತೆ ಜಿಗಿದಾಡಿ ಮೇಟಿಕಂಬವನ್ನು ಮುರಿದು, ಕಟ್ಟಿರುವ ಹಗ್ಗವನ್ನು ಹರಿದು ಹಂತಿಯನ್ನೇ ಗತಿಗೆಡಿಸಿ ಬಿಡುತ್ತದೆ. ಇಲ್ಲವೆ ಕೊರಳಿಗೆ ಕಟ್ಟಿದ ಹಗ್ಗವನ್ನು ಉರುಲು ಮಾಡಿಕೊಂಡು ತಲೆಸುತ್ತಿ ಬೀಳಲುಬಹುದು. ಇಂತಹ ಸ್ಥಿತಿಯನ್ನು ಕುರಿತು ಬಸವಣ್ಣನವರು ತಮ್ಮ ಬೆಡಗಿನ ವಚನವೊಂದರಲ್ಲಿ '**ಮೇಟಿಕಿತ್ತಿತು ಕಣಹಾಳಾಯಿತಯ್ಯ**' (ವಚನ ೧೩೯) ಎನ್ನುವಲ್ಲಿ ವ್ಯವಸ್ಥೆಯ ಅಸ್ತವ್ಯಸ್ಥತೆಯನ್ನು ಸೂಚಿಸುತ್ತಾರೆ. ಹೀಗಾಗಿ '**ಹಳೆಯ ಎತ್ತನ್ನು ಹಳದಾಗ ಹೂಡು**' ಎನ್ನುವ ಮೂಲಕ 'ಅನುಭವ'ಕ್ಕೆ ಆದ್ಯತೆ ಕೊಡಲಾಗಿದೆ.

ಹಂತಿಸಂದರ್ಭದ ಇನ್ನೊಂದು ವೈಶಿಷ್ಟ್ಯವೆಂದರೆ ಹಂತಿಕಟ್ಟಿದ ಕೂಡಲೇ ಹೊಸಮಣ್ಣಿನ ಕುಡಿಕೆಯನ್ನು ಕಣದ ದಂಡೆಯಲ್ಲಿಡುವ ಪದ್ಧತಿ. ರಾಶಿಮುಗಿಯುವ ತನಕ ಮತ್ತು ಮುಗಿದ ಬಳಿಕವೂ ಅನ್ನ ನೀರಿನ ಸಂಕೇತವಾಗಿ ಇದು ಬಳಕೆಯಾಗುತ್ತದೆ. ಕಣದ ದಂಡೆಯ ಮೇಲಿರುವ ಹೊಟ್ಟಿನ ಕುಟ್ರಿಯ ಮರೆಯಲ್ಲಿರುವ ಇದಕ್ಕೆ ಕಣದಲ್ಲಿ ನಡೆಯುವ ಸಕಲ ಪೂಜೆಗಳು ಸಲ್ಲುತ್ತವೆ. ಪ್ರತಿದಿನ ಮಾಡುವ ಆಹಾರ ಪದಾರ್ಥಗಳನ್ನು ಇದರಲ್ಲಿ ಹಾಕುತ್ತಾರೆ. ಊಟದ ಮುಂಚೆ ರಾಶಿ ಹುಲುಸಾಗಲೀ ಎಂದು ಇದರಿಂದ ಚೆರಗ ಚೆಲ್ಲುತ್ತಾರೆ. ರಾಶಿ ಮುಗಿದ ಮೇಲೆ ಈ ಕುಡಿಕೆಯನ್ನು ಧಾನ್ಯ ಸಂಗ್ರಹಿಸುವ ಬಳತದಲ್ಲಿ ನೀರು ಹಾಕಿ ಇಡುತ್ತಾರೆ. ಇನ್ನೂ ಕೆಲವು ಕಡೆ ಧಾನ್ಯ ತುಂಬಿ ಮನೆಯ ಅಟ್ಟದ ಮೇಲಿಡುತ್ತಾರೆ ಅಥವಾ ರಾಶಿ ದಿವಸ ಧಾನ್ಯಸಮೇತ ದಾನ ಮಾಡುವುದೂ ಇದೆ.

ಹಗೆಯಲ್ಲಿ ಕಾಳು ತುಂಬಿದ ಮೇಲೆ ಈ ಕುಡಿಕೆಯಲ್ಲಿ ನೀರು ಹಾಕಿ ಕಾಳಿನ ಮೇಲೆ ಇಡಲಾಗುತ್ತದೆ. ಇದು ಕೂಡ ಅನ್ನದ ಜೊತೆಗೆ ನೀರು ಎನ್ನುವ ಅರ್ಥವನ್ನು ಕೊಟ್ಟರೂ ವೈಜ್ಞಾನಿಕವಾಗಿ ಗಮನಸೆಳೆಯುತ್ತದೆ. ಹೀಗೆ ಇಡುವುದರಿಂದ ಜೋಳದಲ್ಲಿ ಹುಳಗಳಾಗ ಬಾರದೆಂಬ ಜಾಗ್ರತೆಯ ಕ್ರಮ ಇದೆ. ಒಂದು ವೇಳೆ 'ಹುಳು' 'ನುಷಿ'ಗಳಾದರೂ ಈ ನೀರಿನ ಕುಡಿಕೆಯಲ್ಲಿ ಬಂದುಬೀಳುವ ಮೂಲಕ ಸತ್ತುಹೋಗುತ್ತವೆ. ಇದರಿಂದ ಕಾಳು ನಷ್ಟವಾಗುವುದು ತಪ್ಪುತ್ತದೆ. ಹೇಗಿದೆ ಇವರ ರಕ್ಷಣಾ ತಂತ್ರ.

### ಹಂತಿಯ ಅವಧಿ ಮತ್ತು ಕ್ರಿಯೆಗಳು :

ಸಾಮಾನ್ಯವಾಗಿ ಈ ಹಂತಿಯ ಕ್ರಿಯೆ ಬೆಳ್ಳಬೆಳತನಕ ನಡೆಯುತ್ತಿತ್ತು. ಗೆಳೆಯರು ಬಂಧು ಬಾಂಧವರು ದೈಹಿಕವಾಗಿ ಮಾನಸಿಕವಾಗಿ ರಾಶಿಯಲ್ಲಿ ಭಾಗಿಯಾಗಿ ಹಾಡು, ಕಥೆಗಳಂತಹ ಮನರಂಜನೆಗಳ ಮೂಲಕ ಇದನ್ನು ನಡೆಸುತ್ತಿದ್ದರು. ಶ್ರಮಪರಿಹಾರಕ್ಕಾಗಿ ವಿವಿಧ ವಿನೋದಾವಳಿಗಳನ್ನು ಮಾಡುತ್ತಿದ್ದರು.[೨] ಸಂಜೆ ಉಂಡುಗಿಂಡು ಹಂತಿಕಟ್ಟಿದರೆ ಮೂಡಲು ಹರಿಯುವವರೆಗೂ ಇದು ನಡೆಯುತ್ತಿತ್ತು. ತೆನೆ ಕಡಿಮೆ ಇದ್ದರೆ ಎರಡು ಮೂರು ತಾಸುಗಳು ಸಾಕಾಗುತ್ತದೆ. ಇದು ಹೊಲದ ವಿಸ್ತಾರ ಮತ್ತು ಅದರ ಫಸಲಿನ

ಮೇಲೆ ನಿರ್ಣಿತವಾಗುತ್ತಿತ್ತು.

ಇಂತಹ ಹಂತಿ ನುರಿಯಲು ಸಹಾಯಕವಾಗುವಂತೆ ಬೇಸರ ಕಳೆಯಲು ಹಂತಿ ಹಾಡು ಹಾಡುತ್ತಿದ್ದ ಗುಂಪುಗಳಿರುತ್ತಿದ್ದವು. ರಾಶಿಯ ಮಾಲೀಕರು ಇವರಿಗೆ ಚುರುಮರಿ, ಖರ್ಜೂರ, ಕಬ್ಬು, ಕರದಂಟು, ಉಂಡಿ, ಮುಂತಾದ ತಿಂಡಿ ತಿನಿಸುಗಳನ್ನು ತಿನ್ನಲು ಕೊಟ್ಟು ರಾತ್ರಿಯಿಡೀ ಹಾಡಿಸುತ್ತಿದ್ದರು. ಹೆಚ್ಚಾಗಿ ಹಂತಿ ತಿರುವುತ್ತಿದ್ದವರೇ ಹಾಡುತ್ತಿದ್ದುದು ಇದೆ. ಹಾಡಿ ಹಾಡಿ ಗಂಟಲು ಒಣಗಿದಾಗ ಚಹ, ಶುಂಠಿಬೆಲ್ಲ ಎಲೆ ಅಡಿಕೆ, ಕ್ವಚಿತವಾಗಿ ಸರಾಯಿಯ ವ್ಯವಸ್ಥೆಯೂ ಇರುತ್ತಿತ್ತು.

ಕೃಷಿ ಸಂದರ್ಭದ ಒಂದು ವಿಶೇಷತೆ ಎಂದರೆ ಗಣಪತಿಯನ್ನು ನೆನೆಯದಿರುವುದು. ಭಾರತೀಯ ಪರಂಪರೆಯಲ್ಲಿ ಪ್ರತಿಯೊಂದು ಕೆಲಸಕ್ಕೂ ವಿಘ್ನೇಶ್ವರ ಪೂಜೆ ಮೊದಲಾಗುತ್ತದೆ. ಆದರೆ ಕೃಷಿಯಲ್ಲಿ ಗಣಪತಿಗಿಂತ ಭೂತಾಯಿಗೆ ಹೆಚ್ಚು ಮಹತ್ವ ಕಂಡುಬರುತ್ತದೆ.

ಹಂತಿಪದಕ್ಕೊಂದಿಲ್ಲ ನಿಂತುಬೆನಕನಪೂಜೆ
ಹಂತಿಯೊಳು ಪೂಜೆ ಶರಣರಿಗೆ । ಗಣಪತಿಗೆ
ಸ್ವಂತ ನೆನೆಯೆಂದ ಒಕ್ಕಲಿಗ[೩]

ಎನ್ನುವಲ್ಲಿ ಎಲ್ಲಕ್ಕಿಂತ ಮೊದಲಿನ ಮಹತ್ವವನ್ನು ಭೂಮಿತಾಯಿಗೆ, ಶರಣರಿಗೆ, ಕೊಟ್ಟಿದ್ದು ಎದ್ದುಕಾಣುತ್ತದೆ.

ಹಂತಿ ಪದಗಳಲ್ಲಿ ಸಾಮಾನ್ಯವಾಗಿ ಭೂದೇವಿ, ಬಸವಣ್ಣ, ಮಳೆರಾಜ, ಶಿವಶರಣರ ಕುರಿತ ಹಾಡುಗಳು, ತತ್ವಪದಗಳು ಮತ್ತು ಹಲವು ರೀತಿಯ ಬಿಡಿಪದಗಳು ಕಂಡು ಬರುತ್ತವೆ. ವಾದ-ಪ್ರತಿವಾದ, ಹಾಸ್ಯ-ವಿಡಂಬಣೆಯುಳ್ಳ ಪದಗಳೂ ಇರುತ್ತವೆ. ಭೂದೇವಿ ಕುರಿತಂತೆ ಒಂದು ಉದಾಹರಣೆಯನ್ನು ನೋಡಬಹುದು.

ಹತ್ತಿಹೂವಿನ ಸೀರಿ ತೆಕ್ಕಿಗಡತರ ಜುಮ್ಮ
ಬಿಚ್ಚಿಹರಿವ್ಯಾಳೋ ಭೂಮಿಗಿ । ಭೂತಾಯಿ
ಉಕ್ಕಿಹರಿದಾಳೋ ಕಣದಾಗ[೪]

ಬಸವಣ್ಣನ ಕುರಿತು:

ಜೋಳದ್ಹಂತಿಕಟ್ಟಿ ನಾಳಿಗಿ ತಿಂಗಳಾತು
ಆನಿತುಳದರ ಸವದಿಲ್ಲ । ಬಸವಣ್ಣ
ಪಾದ ಇಟ್ಟಲ್ಲಿ ನುಗ್ಗದ್ದ[೫]

ಹೀಗೆ ಪ್ರಕೃತಿ ದೇವತೆಗಳು ಗ್ರಾಮದೇವತೆಗಳು ಕುರಿತಾದ ವೈವಿಧ್ಯಮಯ ಹಾಡುಗಳನ್ನೂ ಹಂತಿ ಸಂದರ್ಭದಲ್ಲಿ ಕಾಣಬಹುದಾಗಿದೆ.

ಕಣದಲ್ಲಿ ಎರಡು ಗುಂಪುಗಳಿರುತ್ತವೆ. ವಾದ-ಪ್ರತಿವಾದ, ಸವಾಲ್-ಜವಾಬ್‌ದಂತಹ ಹಾಡುಗಳು ಇಲ್ಲಿ ನಿರ್ವಹಣೆಗೊಳ್ಳುತ್ತವೆ. ಎಲ್ಲವೂ ಆಶುರಚನೆಗಳೇ ಆಗಿರುತ್ತವೆ. ಈ ಪ್ರಕ್ರಿಯೆ ತುಂಬ ಆರೋಗ್ಯಪೂರ್ಣವಾತಾವರಣದಿಂದ ಕೂಡಿರುತ್ತದೆ.

ಒಡೆದು ಹಾಡುವೆನೆಂದು ಎಡವಿಬೀಳುವರೆಷ್ಟೋ
ಜಡಮತಿಗಳೆಲ್ಲ ತಡಪಡಿಸಿ । ನಿನ್ನಾಡ
ಮಿಡಿಯುದಕೆ ಬಾಯಿ ಕಳಕೊಂಡ[೬]

ಎನ್ನುವಲ್ಲಿ ಬಂಡವಾಳವಿಲ್ಲದೆ ಸುಳ್ಳುಹಾಡಲು ಬಂದ ಹಾಡುಗಾರನಿಗೆ ನಿಪುಣ ಹಾಡುಗಾರ ಮೂದಲಿಸುವ ಮುಖಾಂತರ ತನ್ನ ಹಾಡಿನ ಸಮೃದ್ಧಿಯಿಂದ ಎದುರಾಳಿ, ಬಾಯಿಸಹ ತೆಗೆಯದೆ ಸೋತು ಸುಣ್ಣವಾಗುವ ಪರಿಯನ್ನು ಗಮನಿಸ ಬಹುದಾಗಿದೆ. '**ಹಂತಿಯು ಹಾಡೆಂದು ಪಂತಕಟ್ಟಲಿ ಬೇಡ ಕಂತಿ ಕರಗುವುದು ನಿಂತಲ್ಲೆ**' ಎನ್ನುವಲ್ಲಿ ಕೂಡ ಒಬ್ಬರಿಗಿಂತ ಒಬ್ಬರು ಹೇಗೆ ಹಾಡಿನಲ್ಲಿ ಪ್ರಬುದ್ಧರಾಗಿದ್ದರು ಎನ್ನುವ ವಿಷಯ ಗ್ರಹಿಕೆಗೆ ಬರುತ್ತದೆ. ಏನೇ ಇದ್ದರೂ ಈ ಹಾಡುಗಾರಿಕೆ ಆರೋಗ್ಯ ಪೂರ್ಣವಾದದ್ದಾಗಿರುತ್ತದೆ. ವಾದದ ಪ್ರಸಂಗದಲ್ಲಿ ಪರಸ್ಪರ ಮೂದಲಿಸುವ ಬೈಯುವ ಕ್ರಿಯೆ ಅತಿರೇಕಕ್ಕೆ ಹೋದರೂ ಬೆಳಗಿನ ಹೊತ್ತಿಗೆ ಅದು ಮತ್ತೆ ಸೌಹಾರ್ದಯುತವಾಗಿ ಬಗೆಹರಿಯುತ್ತಿತ್ತು.

ಬೆಳ್ಳಬೆಳತನಕ ಹಂತಿ ನಡೆಯುತ್ತಿತ್ತು ಎನ್ನುವುದಕ್ಕೆ-

ಬೆಳವಲು ಬೆಳೆಯಾಗಿ ಬಳುವಳಿಯು ಹೊಸಮತಕೆ
ಬೆಳತನಕ ಚೌಡಯ್ಯ । ಕಣದೊಳಗೆ
ಬೆಳೆಗೆ ಬಳುವಳಿಯು ಹುಲುಸಾಯ್ತು[೭]

ಇಡೀ ರಾತ್ರಿ ಆಧ್ಯಾತ್ಮ, ಚರಿತ್ರೆ, ನೀತಿ, ದೇವರು, ಹಲಕಟ್ಟ ಮುಂತಾದ ವಿಷಯಗಳ ಕುರಿತ ಹಾಡಿನ ಪಂದ್ಯ ಸಾಗುತ್ತಿತ್ತು

ಈಟೀಟ ಮೊಲೆಯವಳ ಚೀಟಿಕುಪ್ಪಸದವಳ
ಹಾದ ಹೊಕ್ಕಿನಿ ಹರಕೋರ । ಎಲೆ ಹುಡಿಗಿ
ತೀದ ಹೊಕ್ಕೀನಿ ತಿಳಕೋರ[೮]

ಎನ್ನುವ ಹಲಕಟ್ಟ ಪದಗಳನ್ನು ಹಾಡುತ್ತಾರೆ. ಆದರೆ ಅವರಿರುವ ಮುಕ್ತ ಪರಿಸರದಲ್ಲಿ ಯಾವ ಮುಜುಗರವೂ ಅವರಿಗಿರುವುದಿಲ್ಲ ಏನಿದ್ದರೂ ಅವರದು 'ತೆರೆದ ರಹಸ್ಯ'. ಹೀಗೆ ಹಾಡಿಗೆ ಹಾಡು ಸಾಗಿ ಹಂತಿ ನುರಿತಿರುವಾಗ ಬೆಳಕಾಗಿದ್ದೇ ಅವರಿಗೆ

ಗೊತ್ತಾಗುತ್ತಿರಲಿಲ್ಲ.

ಹಾಡಿದವು ದಿಕ್ಕುಗಳು ಬೇಡಿದವು ಕಾಡುಗಳು
ಹಾಡುಗೊಲ್ಲಾಳ ಬೆಳತನಕ । ಶಿವಲೋಕ
ನೋಡುನೋಡುತಲೆ ಬೆಳಕಾತು[೯]

ಪರಸ್ಪರ ಧ್ವನಿಗಳು ಹೇಗಿರುತ್ತಿದ್ದವೆಂದರೆ ಇವರ ಹಾಡಿಗೆ ಇಡೀ ವಾತಾವರಣವೇ ಅನುರಣಗೊಳ್ಳುತ್ತಿತ್ತು. **'ಗಂಟಲ ಧ್ವನಿಗಳು ಗಂಟೆ ಬಾರಿಸಿದಂತೆ ಎಂಟು ಕಿನ್ನರಿ ನುಡಿಸಿದಂತೆ'** ಇಡೀ ರಾತ್ರಿ ದಿಕ್ಕುಗಳೇ ಪ್ರತಿ ಧ್ವನಿಸುತ್ತಿದ್ದವಂತೆ ಕತ್ತಲೆಯೇ ನಾಚಿ ಕರಗುತ್ತಿತಂತೆ. -

ರಾಚಯ್ಯ ನಿನಮಗ ಊಚಸಾವಳಿಗೇಶ
ಕೋಚೆತ್ತಿ ಕಣಕೆ ಹಾಡಿದನು । ಬೆಳತನಕ
ನಾಚಿಕತ್ತಲೆಯು ಬೆಳಕಾಯ್ತು[೧೦]

ಎನ್ನುವಲ್ಲಿ ಹಾಡುಗಾರರ ರೀತಿ ರಿವಾಜುಗಳು ಮಧುರತೆಗಳು ಗ್ರಹಿಕೆಗೆ ಬರುತ್ತವೆ. ಕೋಚೆತ್ತಿ ಹಾಡುವುದು ಅಂದರೆ ಸ್ವರವೆತ್ತಿ ಹಾಡುವುದು, ಹಿತವಾಗಿ ಹಾಡುವುದು. ಈ ಹಾಡು ರಾತ್ರಿಯ ನೀರವತೆಯಲ್ಲಿ ಮೂರರಿಂದ ನಾಲ್ಕು ಕಿಲೋಮೀಟರ್ ದೂರದವರೆಗೆ ಕೇಳುತ್ತಿತ್ತೆಂದು ಪ್ರಸಿದ್ಧ ಹಾಡುಗಾರ ವಿಠಪ್ಪ ಶೇಲಾರ (೭೫) ಹೇಳುತ್ತಾರೆ.

ಈ ಎಲ್ಲ ಹಿನ್ನೆಲೆಯಲ್ಲಿ ಗಮನಿಸಿದಾಗ ಹಂತಿ ಒಂದು ಉತ್ಸಾಹಭರಿತ ಜೀವನಾವರ್ತನಕ್ರಿಯೆಯಾಗಿದ್ದುದು ಸ್ಪಷ್ಟವಾಗುತ್ತದೆ. ವರ್ಷವೆಲ್ಲ ದುಡಿದು ಅದರ ಫಲವನ್ನು ಅನುಭವಿಸಲು ಹಾದಿಮಾಡಿಕೊಡುವ ಸುಗ್ಗಿಯ ಸಂದರ್ಭ ರೈತನ ಅವಿಸ್ಮರಣೀಯ ದಿನಗಳು. ಫಲಕೊಟ್ಟು ಭೂತಾಯಿಯ ಮಡಿಲಲ್ಲೇ ಅದನ್ನು ಸಂಸ್ಕರಿಸಿ, ಉಣಬಡಿಸಿ ತಾನೂ ಅನುಭವಿಸುವ ಕ್ರಿಯೆ ನಿಜಕ್ಕೂ ಆದರ್ಶವಾದದ್ದು. ಇಂದು ನಮ್ಮದಷ್ಟೇ ಅಲ್ಲ ಬೇರೆಯವರದನ್ನೂ ಕದ್ದು ತಂದು ಅನುಭವಿಸುವ ನಮಗೆ ಈ ಸುಖ ಎಲ್ಲಿಂದ ಬರಬೇಕು. ಇಂತಹ ಸುಖಾನುಭವವನ್ನು ರೈತನ ಮಾತಿನಿಂದಲೇ ಗ್ರಹಿಸಬಹುದು.

ಹಂತಿಯ ಕಟ್ಟುವನ ಹೌಸ ಹುರುಪನು ನೋಡ
ಹಂತೀಯ ಧೂಳ ಮೈ ಧೂಳೋ - ಎನ್ನುವಲ್ಲಿ

ಹಂತಿಯ ಪ್ರಸಂಗ ತುಂಬ ಉತ್ಸಾಹಭರಿತ ಕ್ರಿಯೆಯಾಗಿತ್ತು. ಅಂತದರಲ್ಲಿ ಸುಂಕ ಮೈ ಚುಚ್ಚುತ್ತಿದ್ದರೂ ನೋವಾಗದೆ ಸಹ್ಯವಾಗುತ್ತಿತ್ತು ಎನ್ನುವುದನ್ನು ಗಮನಿಸಬಹುದಾಗಿದೆ. ಇದಕ್ಕೆ ಇನ್ನೂ ಒಂದು ಬಲವಾದ ಕಾರಣವಿದೆ. ಸುಂಕ ಜಾಡಿಸಿದರೆ ಹುಲುಸು ಕಡಿಮೆಯಾಗುತ್ತದೆಂಬ ನಂಬಿಕೆ. ಇದರಿಂದಾಗಿ ಹಂತಿಯಿಂದ ಹಿಡಿದು ರಾಶಿ ಮನೆಗೆ ಬಂದು ಬೀಳುವ ಎರಡು ಮೂರು ದಿನಗಳ ಅವಧಿಯುದ್ದಕ್ಕೂ ರೈತ ಸ್ನಾನಕೂಡ

ಮಾಡುವುದಿಲ್ಲ. ಸುಂಕ ಮೈದರಿಸಿಲೆ ಉಣ್ಣುವುದು ಉಡುವುದು ಎಂದರೆ ಅವನಿಗೆ ಬಲುಖುಷಿ. ಅಂತೆಯೇ ಹೆಣ್ಣುಕೊಡುವ ತರುವ ವಿಷಯದಲ್ಲಿ ಹಳ್ಳಿಯಲ್ಲಿ ಮೊದಲು ಕೇಳುವುದು ಭೂಮಿ ಮತ್ತು ಎತ್ತುಗಳಿವೆಯೆ? ಎಂಬುದು. ಎತ್ತು ಮತ್ತು ಭೂಮಿಯಿದ್ದರೆ ಆತ ಒಳ್ಳೆ ಬಾಳ್ವೆವಂತನಾಗಬಲ್ಲ ಬದುಕಬಲ್ಲ ಎನ್ನುವ ಮಾನದಂಡ ರೈತಾಪಿ ಜನರದ್ದಾಗಿದೆ.

ರಾಶಿಯ 'ಸುಂಕ' ರೈತನಲ್ಲಿ ಫಸಲಿನ, ಸಮೃದ್ಧಿಯ ಸಂಕೇತವಾಗಿದೆ. ಸುಂಕ ಜಾಸ್ತಿ ಇದ್ದಷ್ಟು ಹುಲುಸು ಜಾಸ್ತಿ ಎಂಬ ಅರ್ಥಕೂಡ ಇದೆ. ಕೇವಲ ತನಗಷ್ಟೇ ಅಲ್ಲ ಹಂತಿಹೊಡೆದ ಎತ್ತು ಅಂತೇಲಿ ಬಂದರೆ ಅದರ ಮೈ ಸುಂಕವನ್ನು ಜಾಡಿಸಲು ಹಿಂದು ಮುಂದು ನೋಡುತ್ತಾನೆ.

ಹಂತೀಯ ಹೊಡೆದೆತ್ತ ಹಂತೇಲಿ ಬಂದರ
ಸುಂಕ ಜಾಡಿಸದೆ ಸೆರಗೀಲೆ । ಕಂದನಿಗೆ
ಹಂತೀಯ ಎತ್ತು ಹದಿನಾರು[೧೧]

ಹೆತ್ತ ತಾಯಿ ತನ್ನ ಮಗನ ವಗತನದ ವೈಭವವನ್ನು ಎತ್ತಿನ (ಮನೆಮಗ) ಬಗೆಗಿನ ಪ್ರೀತಿಯನ್ನು ವ್ಯಕ್ತಪಡಿಸಿರುವುದನ್ನು ಇಲ್ಲಿ ಗಮನಿಸಬಹುದು. ಇಡೀ ಕುಟುಂಬವೇ ರಾಶಿಯ ಈ ಪ್ರಕ್ರಿಯೆಯಲ್ಲಿ ದೈಹಿಕವಾಗಿ ಭಾವನಾತ್ಮಕವಾಗಿ ಸಂಪೂರ್ಣ ಭಾಗಿ ಯಾಗುತ್ತಿತ್ತು ಎಂಬುದನ್ನು ಇಲ್ಲಿ ಕಂಡುಕೊಳ್ಳಬಹುದಾಗಿದೆ.

ಸುಂಕದ ಸಮೃದ್ಧಿಯನ್ನು ತೋರುವ ಇನ್ನೊಂದು ಹಾಡನ್ನು ಗಮನಿಸಬಹುದು.

ಕಂಕಿಹಾರಿತು ಕೊಂಕಣಕ ಹೊಟ್ಟು ಹಾರೀತು ಪಟ್ಟಣಕ
ಬಿಳಿಎತ್ತಿನ ಮ್ಯಾಲಿ ಬೆಳದಿತೋ ಸುಂಕ
ಕೆಂದೆತ್ತಿನ ಮ್ಯಾಲಿ ಕೆರೆದೀತೋ ಸುಂಕ[೧೨]

ಸುಂಕದ ಈ ಸಮೃದ್ಧಿಯ ಮೇಲೆ ರಾಶಿಯ ಮಾನದಂಡ ಮಾಡುತ್ತಿದ್ದರು. ಬಿಳಿಎತ್ತು ಮತ್ತು ಕೆಂದೆತ್ತುಗಳು ಗುರುತು ಸಿಗದಷ್ಟು ಸುಂಕ ಮೈಮೇಲಿತ್ತು ಎನ್ನುವುದು ರಾಶಿಯ ಆಗಾಧತೆಯನ್ನು ಅದರ ಪರಿಶ್ರಮವನ್ನು ಕಣ್ಣಿಗೆ ಕಟ್ಟುತ್ತದೆ. ಅದಕ್ಕಾಗಿಯೇ ಹೆಚ್ಚೆಚ್ಚು ಜನ ರಾಶಿಗೆ ಬೇಕಾಗುತ್ತದೆ. ಇದೇ ಸಂದರ್ಭವನ್ನು ನೆಪಮಾಡಿಕೊಂಡು ಕೆಲ ಸೋಮಾರಿಗಳು ಹಂತಿಸಂದರ್ಭದ ತಿಂಡಿ ತಿನಿಸು, ಊಟ ಉಪಚಾರಕ್ಕಾಗಿಯೇ ಕಣಕ್ಕೆ ಬರುವುದುಂಟು ಅಂತಹವರನ್ನು ಕುರಿತು ಪದವೊಂದಿದೆ.

ಹುಗ್ಗಿ ಉಣಿಸ್ಯಾರಂತ ಹಿಗ್ಗೀಲಿ ಬಂದ್ರ
ಡೊಗ್ಗಿಸ್ಯಾರಣ್ಣ ಹಂತಿಗಿ । ಗೌಡ್ರು
ಬಗ್ಗಿಸ್ಯಾರಣ್ಣ ಕಂಕೀಗೋ[೧೩]

ಹಂತಿ ನೆಡೆದಂತೆ ರಾತ್ರಿಕಳೆದಂತೆ ಕಂಕಿ ನುರಿತಂತೆ ಕೆಲಸಗಳು ಜಾಸ್ತಿಯಾಗಲು ಶುರುವಾಗುತ್ತವೆ. ಹೆಚ್ಚೆಚ್ಚು ಜನರ ಅವಶ್ಯಕತೆ ಬೀಳುತ್ತದೆ. ಉಣಲಿಕ್ಕಾಗಿಯೇ ಕಣಕ್ಕೆ ಬಂದ ತಿನಬಡಕರ ಸ್ಥಿತಿಯಂತೂ ಹೇಳತೀರದು. ಸುಂಕಿಗೆ ಹೆದರಿ ರಾಶಿಯಲ್ಲಿಳಿಯುದೇ ಮೂಲೆಯಲ್ಲಿ ಮುದುರಿ ಕುಂತಿದ್ದರೂ ಎಳೆತಂದು ಕಂಕಿತೆಗೆಯಲು, ಹಂತಿಹೊಡೆಯಲು ಹಚ್ಚುವ ರೀತಿ ಗಮನಾರ್ಹವಾದದ್ದು. ಅಂದರೆ ಯಾರೂಕೂಡ ಸುಗ್ಗಿಯ ಈ ಸುಂಕದ ಕಡಿತದಿಂದ ತಪ್ಪಿಸಿಕೊಳ್ಳಲು ಸಾಧ್ಯವಾಗುತ್ತಿರಲಿಲ್ಲ.

ಈ ರೀತಿ ಇಡೀ ರಾತ್ರಿ ಹಂತಿ ತಿರುವಿ ತೆನೆ ನುರಿತ ಮೇಲೆ ಬೆಳಗಿನ ಐದು ಅಥವಾ ಆರುಗಂಟೆಗೆ ಹಂತಿ ಬಿಡುವರು. ಹಂತಿ ಬಿಡುವ ಮುನ್ನ ಬೂದನ ಪೂಜೆ ನಡೆಯುತ್ತಿತ್ತು. ಒಂದು ಹಂತಿ ಪದದಲ್ಲಿ-

ಹಂತಿ ಹತ್ತಿಗಿ ಬಂತೋ । ಕಂಕಿ ಕಡೆಯಾಕ ಬಂತೊ
ಕಡೆಯೆತ್ತಿನ್ಹೆಂಡ್ಯೊಂದು ಹಿಡಿಬೇಕೊ । ಬೂದಗನ ಮಾಡಬೇಕೋ
ಬೂದಗನ ಮಾಡಬೇಕೊ । ಕೂದಲ ಕಾಯಬೇಕೋ
ಬೂದಗನ ಪದವೊಂದನಬೇಕೊ । ಹಂತಿ ಬಿಡಬೇಕು[೧೪]

ಇಡೀ ಹಾಡು ಹಂತಿಯ ಕೊನೆಯ ಹಂತದ ಕ್ರಿಯೆಯನ್ನು ತುಂಬ ದಟ್ಟವಾಗಿ ಚಿತ್ರಿಸುತ್ತದೆ. ಹಂತಿ ಬಿಡುವ ಮುನ್ನ ಕಡಿಎತ್ತಿನ ಹೆಂಡಿ ಹಿಡಿದು ಬೂದನನ್ನು ಮಾಡುತ್ತಾರೆ. ಎಲ್ಲ ಎತ್ತಿನ ಬಾಲದ ಜವಿಗಳನ್ನು ಹರಿದು ಅದಕ್ಕೆ ಜುಟ್ಟು ಚುಚ್ಚುತ್ತಾರೆ. ಬೂದನ ಜೊತೆಗೆ ಮೇಟಿಕಂಬ, ಹಂತಿಎತ್ತು, ರ್ಯಾಗೋಲು, ಸೆಳ್ಳು, ಕಣ, ಗ್ವಾರಿ ಮುಂತಾದ ರಾಶಿಯ ಪರಿಕರಗಳೆಲ್ಲವನ್ನೂ ಪೂಜೆಮಾಡಿ ಹಂತಿಯನ್ನು ಬಿಡುತ್ತಾರೆ.

ಹಂತಿ ಬಿಟ್ಟಮೇಲೆ ಕಂಕಿಯನ್ನು ತೆಗೆದು ಕಣದ ದಂಡಿಗೆ ಮಾಡಿದ 'ಪಡ'ದಲ್ಲಿ ಹಾಕುತ್ತಾರೆ. ಇದರಲ್ಲಿ ಇನ್ನೂ ಅಲಲ್ಲಿ ಕಾಳು ಉಳಿದಿರುತ್ತವೆ. 'ತಲಿರಾಶಿ' (ಮೊದಲಕಂತು) ಎಲ್ಲ ಹಸನಾದ ಮೇಲೆ ಮತ್ತೊಂದು ಸಲ ಹಂತಿಕಟ್ಟಿ ಇದನ್ನು ತುಳಿಸುತ್ತಾರೆ. ಇದಕ್ಕೆ 'ನಡಗಾನ' 'ಕಡಗಾನ' ಎಂದು ಹೆಸರು. ಮುಖ್ಯ ರಾಶಿಯಷ್ಟು ಉತ್ಸಾಹ ಇದರಲ್ಲಿ ತೋರದಿದ್ದರೂ, ದೊಡ್ಡರಾಶಿಯಾಗಿದ್ದರೆ ಇದರಲ್ಲೆ ಅರಿಂದ ೧೦ ಚೀಲ ಜೋಳವನ್ನು ಪಡೆಯಬಹುದು. ಕಂಕಿ ತೆಗೆದಾದ ಮೇಲೆ 'ಮದ' (ಸುಂಕದಿಂದ ಕೂಡಿದ ಕಾಳು)ವನ್ನು ಮೇಟಿಕಂಬಕ್ಕೆ ಗುಂಪಿಹಾಕುತ್ತಾರೆ.

ಈ ಸಂದರ್ಭದಲ್ಲಿ ಚುಟುಕು ಹೇಳುವುದು ಕಂಡುಬರುತ್ತವೆ. ಇವು ತುಂಬ ಹಾಸ್ಯಭರಿತವಾಗಿರುತ್ತವೆ. ಇಡೀ ರಾತ್ರಿಮಾಡಿದ ಕೆಲಸದ ಧನಿವು ಲೆಕ್ಕಕ್ಕೆ ಬಾರದಿರಲಿ ಎನ್ನುವುದೊಂದಾದರೆ, ಸುಂಕದ ಕಡಿತ ಕೂಡ ಗಮನಕ್ಕೆ ಬರದೆ ಕೆಲಸ ನಡೆಯಬೇಕು ಎನ್ನುವುದು ಇನ್ನೊಂದು ನಂಬಿಕೆಯಾಗಿದೆ. ಒಬ್ಬ 'ರ್ಯಾಗೋಲಿ'ನಿಂದ ಕಂಕಿ ಎಳೆದರೆ

ಮತ್ತೊಬ್ಬ 'ಗ್ಯಾರಿ'ಯಿಂದ ಮದವನ್ನು ರಾಶಿಮಾಡುತ್ತಿರುತ್ತಾನೆ. ಆಗ ಒಬ್ಬೊಬ್ಬರು ಕ್ರಮವಾಗಿ ಇಂತಹ ಚುಟುಕುಗಳನ್ನು ಹಾಡುಗಳನ್ನು ಹಾಡುತ್ತಾರೆ.

ಉದಾ: ಅಪ್ಪನಿಗೆ ಮೊಣಕಾಲ ಮುಣಗಿ ಹುಲ್ಯುಲಿಗೋ ಹುಲ್ಲುಲಿಗೋ
ಸರಂಬಳಿಗೋ ಸರಂಬಳಿಗೋ ಎಂದು ಮತ್ತೊಬ್ಬ ಹೇಳುತ್ತಾನೆ.

ರಾಶಿಯ ಗಾತ್ರವನ್ನು ಇದು ಸೂಚ್ಯವಾಗಿ ಹೇಳುತ್ತದೆ. ರಾಶಿ ಏರಿ ಹಾಕುವಾಗ ಮೊಣಕಾಲವರೆಗೆ ಯಾಕೆ ತೊಡೆಯವರೆಗೂ ಕಾಲು ಮುಳುಗುತ್ತವೆ. ಮುಳುಗಿದಾಗ ಸುಂಕ ಆಯಕಟ್ಟಿನ ಜಾಗಗಳಿಗೆ ತಟ್ಟಿ ಕೀಟಲೆ ಸುರುಮಾಡುತ್ತದೆ. ಇದನ್ನು ನೋಡುತ್ತಿದ್ದ ಇನ್ನೊಬ್ಬ ಅಥವಾ ಮಗ ತಂದೆಗೆ ವಿನೋದ ಮಾಡಿ ಹಂಗಿಸುವ ಮುಕ್ತ ವಾತಾವರಣವನ್ನು ಇಲ್ಲಿ ಕಾಣತ್ತೇವೆ.

ಯಾಕೋ ಬಸವ ಮುಕಳೆಲ್ಲ ರಾಡ್ಯೋ ಒಬ್ಬವ ಹೇಳಿದರೆ
ಕಾಡಿಗಿಜ್ವಾಳಾ ಕಂಗೆಟ್ಟು ತಿಂದೆ ಎಂದು ಮತ್ತೊಬ್ಬ ಹೇಳುತ್ತಾನೆ.

ಪ್ರಶ್ನೋತ್ತರ ರೂಪದ ಈ ಸಂಭಾಷಣೆಗಳು ತುಂಬ ರಸವತ್ತಾಗಿರುತ್ತವೆ. ಇಡೀ ರಾತ್ರಿ ಹಂತಿ ತುಳಿದು ತುಳಿದು ಕಂಗೆಟ್ಟು ಹೋದ ಎತ್ತು ಹೆಂಡಿ ಹಾಕಿ ಹಾಕಿ ತನ್ನ ಮೈಯ್ಯನ್ನೆಲ್ಲ ಕರಾಬು ಮಾಡಿಕೊಂಡಿರುತ್ತದೆ. ಮೇಲ್ನೋಟಕ್ಕೆ ಇವು ಚುಚ್ಚು ಮಾತುಗಳೆನಿಸಿದರೂ ಆ ಸಂದರ್ಭದಲ್ಲಿ ಅವುಗಳಿಗಿರುವ ಅರ್ಥ ಮತ್ತು ಗೌರವ ತುಂಬ ಮಹತ್ವದ್ದು. ಸಿಟ್ಟು ಸೆಡವುಗಳಿಲ್ಲದ ಮುಕ್ತತೆ ಇಲ್ಲಿನದು. ಶ್ರಮದಲ್ಲಿ ಅವರು ಕಾಣುವ ರಸಿಕತೆಯ ಕಲ್ಪನೆ ನಿಜಕ್ಕೂ ವಿಸ್ಮಯಕರ. ಇಂತಹ ಮೌಲಿಕ ಬದುಕಿನ ರೀತಿ ನಮಗಿಂದು ಬರಲುಸಾಧ್ಯವೇ ಇಲ್ಲ.

ಇಷ್ಟಾದ ಮೇಲೆ ತೂರುವ ಪ್ರಕ್ರಿಯೆ ಆರಂಭವಾಗುತ್ತದೆ. ಇದು ೨ ರೀತಿಯಿಂದ ನಡೆಯುವ ಸಾಧ್ಯತೆ ಇದೆ. ಆಳೆತ್ತರದ ಮೂರುಕಾಲಿನ 'ಮೆಟ್ಟನಾಲ್ಗಿ' ಮೇಲೆ ನಿಂತು ತೂರುವ ಕ್ರಮ ಒಂದು. ರಾಶಿ ಜಾಸ್ತಿ ಇದ್ದರೆ ಎರಡು ಇಂತಹ 'ಮೆಟ್ಟು'ಗಳನ್ನು ಇಟ್ಟು ಅದರ ಮೇಲೆ ಎದುರು ಬದುರು ನಿಂತು ತೂರುತ್ತಾರೆ. ಇದಕ್ಕೆ ಜೋಡಮೆಟ್ಟು ಎಂದು ಕರೆಯುತ್ತಾರೆ. ಒಂದು ವೇಳೆ ಈ 'ಮೆಟ್ಟು' ಸಮಯಕ್ಕೆ ಸರಿಯಾಗಿ ಸಿಗದಿದ್ದರೆ ಎತ್ತಿನ ಬಂಡಿಯನ್ನು ಕಣದಲ್ಲಿ ತಂದು ಅದರ ಹಿಂದಿನ ಮೂಕಿಯ ಮೇಲೆ ನಿಂತು ತೂರುತ್ತಾರೆ. ಈ ರೀತಿ ಬಹಳ ಕಡಿಮೆ. ಯಾಕಂದರೆ ಬಂಡಿ ಕಣದಲ್ಲಿ ಬಂದರೆ ಬಹಳಷ್ಟು ಜಾಗವನ್ನು ಆಕ್ರಮಿಸುತ್ತದೆ. ಆದೂ ಅಲ್ಲದೆ ಕಣ ಒಡೆದು ಹಾಳಾಗಿ ರಾಶಿಯೆಲ್ಲ ಕಲ್ಲುಮಣ್ಣುಗಳಿಂದ ಮಿಶ್ರವಾಗುತ್ತದೆ. ಹೀಗಾಗಿ ಹೆಚ್ಚಾಗಿ ನಿರುಪದ್ರವಿಯಾದ ಮೆಟ್ಟನಾಲ್ಗಿಯನ್ನೇ ಬಳಸಿ ರಾಶಿಯನ್ನು ಹಸನುಗೊಳಿಸುತ್ತಾರೆ. ಮೇಲೊಬ್ಬ ತೂರುತ್ತಿದ್ದರೆ ಮತ್ತೊಬ್ಬ ಮದವನ್ನು ತುಂಬಿ ಕೊಡುತ್ತಾನೆ. ಮೆಟ್ಟಿನ ಕೆಳಗೆ ಒಬ್ಬ ಕುಳಿತು ತೂರುವಾಗ ಬೀಳುವ ಕಡ್ಡಿಕಸರು

ಕಂಕಿಗಳನ್ನು ಅಂದರೆ ಗಾಳಿಗೆ ಹಾರದ ಬಾರವಾದ ವಸ್ತುಗಳನ್ನು ಸೆಳ್ಳಿನಿಂದ ಹೊರಗೆ ತಗೆಯುತ್ತಾನೆ. ಇದು ತುಂಬ ಜಾನತನದ ಕೆಲಸ. ಇಲ್ಲವಾದರೆ ಅಪಾಯವಿದೆ. ಕನಿಷ್ಠ ಮೂರು ಮಂದಿಯ ಕ್ರಿಯೆ ಇದಾಗಿದೆ.

ಈ ತೂರುವ ಕ್ರಿಯೆ ಸಂಪೂರ್ಣವಾಗಿ ಗಾಳಿಯ ಮೇಲೆ ಅವಲಂಬಿತವಾದದ್ದು. ಹೀಗಾಗಿ ರಾಶಿಸಂದರ್ಭದಲ್ಲಿ ಪೂಜಿಸುವ ಪ್ರಮುಖದೇವರುಗಳಲ್ಲಿ ಗಾಳಿದೇವನು ಒಬ್ಬನಾಗಿದ್ದಾನೆ. ಸಾಮಾನ್ಯವಾಗಿ ಮಧ್ಯಾಹ್ನದ ಬಿಸಿಲಿನ ಹೊತ್ತನ್ನುಳಿದು ಉಳಿದೆಲ್ಲ ಹೊತ್ತಿನಲ್ಲಿ ತೂರುವ ಕ್ರಿಯೆ ನಡೆಯುತ್ತದೆ. ಬಿಸಿಲಿನಲ್ಲಿ ಸುಂಕದ ಕಡಿತ ಬಹಳ. ಜೊತೆಗೆ ಗಾಳಿ ಕೂಡ ಈ ಹೊತ್ತಲ್ಲಿ ಕಡಿಮೆ ಇರುತ್ತದೆ. ರಾಶಿತೂರುವುದಾದರೆ ರಾಶಿಯ ಬಹುಮುಖ್ಯ ಭಾಗ ಮುಗಿದಂತೆ. ಆಮೇಲೆ ರಾಶಿತುಂಬುವ ಚಟುವಟಿಕೆ ಆರಂಭವಾಗುತ್ತದೆ.

**ರಾಶಿಬುತ್ತಿ :**

ರಾಶಿಗಾಗಿ ಮಾಡುವ ಊಟಕ್ಕೆ **'ರಾಶ್ಯೂಟ' 'ರಾಶಿಬುತ್ತಿ'** ಎಂದು ಹೆಸರು. ಇದನ್ನು **'ಕಣಸುಗ್ಗಿ' 'ರಾಶಿಸುಗ್ಗಿ' 'ಕಣಚ್ಚು' 'ಸುಗ್ಗ್ಯೂಟ'** ಎಂದು ವಿವಿಧ ಹೆಸರಿನಿಂದ ಕರೆಯುವುದುಂಟು. ಪ್ರಾದೇಶಿಕ ಭಿನ್ನತೆ ಇದಕ್ಕೆ ಮುಖ್ಯಕಾರಣ. ರಾಶಿಬುತ್ತಿಗೆ ಬಹುಮುಖ್ಯವಾಗಿ ಹುಗ್ಗಿ, ಹೋಳಿಗಿ, ಕರಗಡಬು, ಸಜ್ಜಿರೊಟ್ಟಿ, ಕಿಚಡಿ, ಸಜ್ಜಕ ಇತ್ಯಾದಿ ಅಡಿಗೆಗಳನ್ನು ಮಾಡುತ್ತಾರೆ. ಇದು ರೈತನ ಆರ್ಥಿಕ ಸ್ಥಿತಿ ಕಣದಲ್ಲಿನ ರಾಶಿಯ ಮೇಲೆ ನಿರ್ಧರಿತವಾಗುವಂತಹದು. ಉಳ್ಳವರು ಹೆಚ್ಚು ಖರ್ಚುಮಾಡಿದರೆ ಉಳ್ಳದವರು ತನಗೆ ನೀಗಿದ್ದರಲ್ಲೇ ರಾಶಿಬುತ್ತಿ ಮಾಡುತ್ತಾರೆ.

ಸಂಜೆಯ ಹೊತ್ತಿಗೆ ಅಡಿಗೆಯೆಲ್ಲ ಸಜ್ಜಾಗುತ್ತದೆ. ಹಿಂದಿನ ರಾತ್ರಿ ಹಂತಿಗೆ ಬಂದವರನ್ನು ಬಂಧುಬಳಗದವರನ್ನು ಸ್ನೇಹಿತರು, ಮಠದಯ್ಯರು, ಬಡಿಗ, ಕಂಬಾರ, ನಾದಿಗರಂತಹ ಆಯಗಾರರನ್ನು ಮನೆಗೊಬ್ಬರಂತೆ ರಾಶಿಬುತ್ತಿಯ ಊಟಕ್ಕೆ ಕರೆಯುತ್ತಾರೆ. ಶ್ರೀಮಂತರಾಗಿದ್ದರೆ ನೂರಾರು ಜನರನ್ನು ಕರೆಯುತ್ತಾರೆ. ಮಧ್ಯಮ ಅಥವಾ ಬಡವರಾಗಿದ್ದರೆ ಸೀಮಿತ ಚೌಕಟ್ಟಿನಲ್ಲಿ ಇದನ್ನು ಮುಗಿಸಿ ನಿಯಮ ಪಾಲಿಸುತ್ತಾರೆ.

**ರಾಶಿಪೂಜೆ ವಿಧಾನ :**

ರಾಶಿಪೂಜೆ ತುಂಬ ವಿಶಿಷ್ಟವಾದದ್ದು. ತೂರಿದ ರಾಶಿಯನ್ನು ಎರಡು ಹೆಸರಿನಿಂದ ಗುರುತಿಸುತ್ತಾರೆ. ಮೇಟಿಕಂಬಕ್ಕೆ ಗುಂಪಿ ಹಾಕಿದ ರಾಶಿಯನ್ನು 'ತಲಿರಾಶಿ', 'ತನುರಾಶಿ' ಎಂದು ಕರೆಯುತ್ತಾರೆ. ಫಸಲಿನ ಶುದ್ಧ ಮತ್ತು ಮುಖ್ಯವಾದ ಪ್ರಥಮ ರಾಶಿ ಇದು. ತೂರಿದ ಭಾಗದಲ್ಲಿ ಅಂದರೆ ಮೆಟ್ಟಿನ ಕಳಗಡೆ ಮುಖ್ಯರಾಶಿಯ ೩/೧ ಭಾಗದಷ್ಟು

ಉಳಿಸಿರುತ್ತಾರೆ. ಇದಕ್ಕೆ 'ದಾನಧರ್ಮದ ರಾಶಿ' 'ಬೂದನರಾಶಿ' ಎಂದು ಕರೆಯುತ್ತಾರೆ. ಈ ವಿಂಗಡಣೆ ತುಂಬ ಸಾಂಕೇತಿಕವಾಗಿದೆ. ಉತ್ಪಾದನೆಯ ಸಮಾನಹಂಚಿಕೆಯನ್ನು ಇಲ್ಲಿ ಗಮನಿಸಬಹುದಾಗಿದೆ. ದಾನಧರ್ಮದ ರಾಶಿಯನ್ನು ಒಕ್ಕಲಿಗ ಮುಟ್ಟುವುದಿಲ್ಲ. ದಾನಧರ್ಮ ಮಾಡಿ ಉಳಿದರೆ ಅದನ್ನು ಕಣದಲ್ಲಿ ದುಡಿದ ಹೊಲೆಮಕ್ಕಳಿಗೆ ಬಿಟ್ಟು ಬಿಡುತ್ತಾನೆ. ತನ್ನ ಪಾಲಿನ ಉತ್ಪನ್ನವನ್ನು ಮಾತ್ರ ತಾನೊಯ್ಯುತ್ತಾನೆ.

ಕಂಬಕ್ಕೆ ರಾಶಿಹಾಕಿದ ಜೋಳದ ಗುಂಪಿಯ ಮೇಲೆ ಸೂರ್ಯ ಚಂದ್ರರನ್ನು, ನವಗ್ರಹಗಳನ್ನು ಬಿಡಿಸಿರುತ್ತಾರೆ. ಮಠದಯ್ಯ ತಂದ ಹೂಪ್ರತಿಗಳನ್ನು ರಾಶಿಯ ಮೇಲೆ ಚೆಲ್ಲಿರುತ್ತಾರೆ. ರಾಶಿಸುತ್ತ ಮರೆಕೋಲಿನಿಂದ ಗೆರೆ ಹಾಕಿ ಅದರಲ್ಲಿ ಒಲೆಬೂದಿ ತಂದು ಸುತ್ತಲೂ ಉಡದಾರ ಕಟ್ಟುತ್ತಾರೆ. ಇದಕ್ಕೆ ಕರಿಕಟ್ಟುವುದು ಎಂದು ಕರೆಯುತ್ತಾರೆ. ಯಾವ ಕೆಟ್ಟ ಶಕ್ತಿಗಳು ರಾಶಿಗೆ ದೋಕಮಾಡದಿರಲಿ ಎನ್ನುವ ಭಯದ ಭಾವನೆ ಇಲ್ಲಿದೆ. ಇಷ್ಟೆ ಅಲ್ಲ ಈ ಕ್ರಿಯೆಯಲ್ಲಿ ಇನ್ನೂ ಒಂದು ತಾತ್ವಿಕವಾದ ತರ್ಕ ಅಡಗಿದೆ. ಮಾಟಮಂತ್ರದ ಹಿನ್ನೆಲೆಯನ್ನು ಇಲ್ಲಿ ಗುರುತಿಸಬಹುದಾಗಿದೆ. 'ಬೂದಿ' ಮಾಟದ ಮೊದಲವಸ್ತು. ಮತ್ತು ಚಿತ್ರಿತವಾಗುವ ವಸ್ತುಗಳೂ ಕೂಡ ಮಾಟದ ಪ್ರಮುಖ ಪರಿಕರಗಳೇ ಆಗಿವೆ. ಕೃಷಿಯ ಆರಂಭದ ದಿನಗಳಲ್ಲಿ ಈ ಕ್ರಿಯೆ ಬಹಳ ಪ್ರಮುಖವಾಗಿದ್ದ ಬಗ್ಗೆ ತಿಳಿದು ಬರುತ್ತದೆ. ಧರ್ಮ ಇನ್ನೂ ವ್ಯಕ್ತಿಯ ಕ್ರಿಯಾ ಚರಣೆಗಳಲ್ಲಿ ಸೇರುವ ಮುನ್ನ ಪ್ರಕೃತಿಯ ಗತಿಸ್ಥಿಗೆಲ್ಲ ತಾವು ಮಾಡುವ ಮಾಟಮಂತ್ರಗಳೇ ಕಾರಣ ಎನ್ನುವ ನಂಬಿಕೆಯುಳ್ಳ ಕಾಲದಲ್ಲಿ ಧರ್ಮಕ್ಕಿಂತ ಮಾಂತ್ರಿಕತೆಯೇ ಪ್ರಧಾನವಾಗಿತ್ತು. ಧರ್ಮ ಪೂಜೆ ಪ್ರಾರ್ಥನೆ ದಯೆಕರುಣೆ ದಾಸ್ಯಕ್ಕೆ ಒತ್ತುಕೊಟ್ಟರೆ, ಮಾಂತ್ರಿಕತೆ ಸಂಘರ್ಷದಂತಹ ತದ್ವಿರುದ್ಧಗುಣಗಳಿಗೆ ಒತ್ತು ಕೊಡುತ್ತದೆ. ಏನನ್ನಾದರೂ ಪಡೆಯಬೇಕೆಂಬ ಇಚ್ಚೇಯಾದಾಗ ಅದನ್ನು ಬಲತ್ಕಾರ ಯುತವಾಗಿ ಪಡೆಯುವ ಪ್ರವೃತ್ತಿ ಇಲ್ಲಿದೆ. ಬೇಡಿಪಡೆಯುವುದನ್ನು ಈ ಮಾಂತ್ರಿಕತೆ ಒಪ್ಪುವುದಿಲ್ಲ. ತನ್ನದಲ್ಲದ ಶ್ರಮವನ್ನು, ಫಲವನ್ನು ತಾನೇ ಪಡೆಯಬೇಕೆನ್ನುವ ಅತಿಕ್ರಮದ ಸ್ವಭಾವ ಇದರದ್ದು. ಮಾಟಕ್ಕೆ ಪ್ರತಿಯಾಗಿ ಮಾಟವೇ ಮದ್ದು. ಹೀಗಾಗಿ ಬೂದಿಯನ್ನು ರಾಶಿಯಸುತ್ತ ಉಡದಾರ ಕಟ್ಟುವ ಮೂಲಕ, ಸೂರ್ಯಚಂದ್ರ ಗ್ರಹಾದಿಗಳನ್ನು ರಾಶಿಯಮೇಲೆ ಬರೆಯುವ ಮೂಲಕ ಯಾರೂ ರಾಶಿಯನ್ನು ಕದಿಯದಿರಲಿ. ಒಂದು ವೇಳೆ ಕದ್ದರೂ ಹೇಗೆ? ಎಷ್ಟು? ಎಲ್ಲಿ? ಕದ್ದಿದ್ದು ಎನ್ನುವುದನ್ನು ಗುರುತಿಸುವ ಲೆಕ್ಕಾಚಾರ ಈ ಒಟ್ಟು ರಚನೆಯ ಹಿಂದಿನ ಆಶಯವಾಗಿದೆ. ರಾಶಿಗಳ್ಳರು ಹೆಚ್ಚಾಗಿದ್ದ ದಿನಗಳಲ್ಲಿ ರಕ್ಷಣಾತಂತ್ರವಾಗಿ ಇದು ಬಳಕೆಯಾಗಿದ್ದು ಸ್ಪಷ್ಟವಾಗಿದೆ.

ರಾಶಿಪೂಜೆಯ ಮುಂದಿನ ಕ್ರಿಯೆಗಳು ಇದನ್ನು ಇನ್ನೂ ಖಚಿತಪಡಿಸುತ್ತವೆ. ರಾಶಿಪೂಜೆ ಮಾಡುವ ಮುಂದಿನ ಬಾಜು ಪೂರ್ವಾಭಿಮುಖವಾಗಿ ರಾಶಿಯ ಪರಿಕರಗಳಾದ

ಸೆಳ್ಳು, ರ್‍ಯಾಗೋಲು, ಮಡಗುಂಟಿ, ಗ್ವಾರಿಗಳನ್ನಿಟ್ಟು ಪೂಜೆಮಾಡುತ್ತಾರೆ. ಇದಾದ ಮೇಲೆ ನವಗ್ರಹ ಪೂಜೆ ನಡೆಯುತ್ತದೆ. ಎಕ್ಕೆ ಎಲೆಯಲ್ಲಿ ಒಂಭತ್ತು ಎಡೆಗಳನ್ನಿಟ್ಟಿರುತ್ತಾರೆ. ಈ ಎಡೆಗಳೇ ನವಗ್ರಹಗಳ ಪ್ರತಿನಿಧಿಗಳು ಕೂಡ. (ಎಕ್ಕಿ ಎಲೆ ಕೂಡ ಮಾಟ- ಮಂತ್ರಕ್ಕೆ ತುಂಬ ಪ್ರಶಸ್ತವಾದದ್ದು) ಇದಾದ ಮೇಲೆ ಪಶ್ಚಿಮದಿಕ್ಕಿನಲ್ಲಿದ್ದ ಬೂದನ ರಾಶಿ, ಮೆಟ್ಟನಾಲಿಗಿ, ಬಸವಣ್ಣ ಇವರ ಪೂಜೆ ನಡೆಯುತ್ತದೆ. ಇವರಿಗೂ ಪ್ರತ್ಯೇಕ ಎಡೆಗಳನ್ನು ಮಾಡುತ್ತಾರೆ. ಇದೂ ಅಲ್ಲದೆ ಹೊಲದ ಲಕ್ಷ್ಮಿ ಮತ್ತು ಆ ಭೌಗೋಳಿಕ ಪರಿಸರದಲ್ಲಿರುವ ಪ್ರಭಾವಿ ದೇವತೆಗಳಿಗೂ ಕೂಡ ಪೂಜೆ ಸಲ್ಲುತ್ತದೆ.

ಪಾಂಡವರ ಪೂಜೆ ಈ ಸಂದರ್ಭದ ಇನ್ನೊಂದು ವಿಶೇಷ. ಸುಗ್ಗಿಯ ಕಣದ ದಂಡೆಯ ಮೇಲೆ ಹೊಟ್ಟಿನ ಕುಟ್ರಿಯ ಎಡಭಾಗದಲ್ಲಿ ಪಾಂಡವರನ್ನಿಟ್ಟು ಪೂಜೆಮಾಡಿ ಎಡೆ ಮಾಡುತ್ತಾರೆ. ಕಣದೊಳಗೆ ಇವರಿಗೆ ಜಾಗವಿಲ್ಲ (ಬಿ. ಎಸ್. ಗದ್ದಿಗಿ ಮಠ ೧೯೮೫ ; ೧೬೪) ಹೀಗೆ ಕಣದಿಂದ ಹೊರಗಿರುವ ಪಾಂಡವರನ್ನು ಅವರು ಅಜ್ಞಾತವಾಸದಲ್ಲಿದ್ದವರು ಅವರನ್ನು ಉಣಿಸಲು ರಾಶಿಬುತ್ತಿಗೆ ಬರಮಾಡಿಕೊಳ್ಳಲಾಗುತ್ತದೆ ಎನ್ನುವ ನಂಬಿಕೆ ಇದಾಗಿದೆ.

ಕಣದಲ್ಲಿರುವಾಗ ಪರಸ್ಪರ ಮಾತನಾಡುವುದು, ಕೆಮ್ಮುವುದು, ಬಕ್ಕನೆತ್ತಿಲೆ ಇರುವುದು ನಿಷಿದ್ಧ. ಕೇವಲ ಕ್ರಿಯೆ ಮಾತ್ರ ಇಲ್ಲಿ ಪ್ರಮುಖ. ತೀರಮಾತನಾಡುವ ಸಂದರ್ಭಬಂದರೆ ಮೆಲುದನಿಯಲ್ಲಿ ಸಂವಹನವಾಗುವಷ್ಟು ಮಾತನಾಡುತ್ತಾರೆ. ತುಂಬ ಯಾಂತ್ರಿಕತೆ ಮತ್ತು ತಾತ್ಕಾಲಿಕತೆ ಮಾತಿನ ಸಂದರ್ಭದಲ್ಲಿ ಕಂಡು ಬರುತ್ತದೆ. ಮಾಟ- ಮಂತ್ರದಲ್ಲೂ ಕೂಡ ಮಾತಿಗಿಂತ ಕ್ರಿಯೆಯೇ ಪ್ರಧಾನ. ಒಟ್ಟು ಈ ಸಂದರ್ಭದ ಕ್ರಿಯೆಗಳೆಲ್ಲ ಸಂಪೂರ್ಣವಾಗಿ ಮಾಂತ್ರಿಕತೆ ಸೊಗಡನ್ನು ಮೈಗೂಡಿಸಿಕೊಂಡಿವೆ.ಎಂಬುದು ಸ್ಪಷ್ಟವಾಗುತ್ತದೆ.

ರಾಶಿಬುತ್ತಿಯ ಈ ಪ್ರಕ್ರಿಯೆಯನ್ನು ಇನ್ನೊಂದು ರೀತಿಯಿಂದ ಗಮನಿಸಬಹುದು. ಬಹುಮುಖ್ಯವಾಗಿ ಇದು ಧಾನ್ಯ ಪೂಜೆಯನ್ನು ಸಂಕೇತಿಸುತ್ತದೆ. ಗ್ರೀಕರಲ್ಲಿ ಡೆಮಿಟರ್ (Demeter) ಮತ್ತು ಫರ್ಸೆಫೋನ್ (Persephone) ಸಿರಿಯಾ ಬ್ಯಾಬಿಲೋನಿಯಾಗಳಲ್ಲಿ ಎಡೋನಿಸ್ (Adonis) ಫ್ರಿಜಿಯಾಕ್ಕೆ ಆಟಿಸ್ (Attis) ಈಜಿಪ್ತ ಓಸಿರಿಸ್ (Osiris) ಮುಂತಾದವು ಧಾನ್ಯದೇವತೆಗಳಾಗಿ ಪೂಜಿಸಲ್ಪಡುತ್ತವೆ. ಇವೆಲ್ಲ ಆಯಾದೇಶದ ಪೌರಾಣಿಕ ದೇವತೆಗಳು. ಭಾರತೀಯ ಪುರಾಣಗಳಲ್ಲಿ ಅಷ್ಟಲಕ್ಷ್ಮಿಯರಲ್ಲಿ ಧಾನ್ಯಲಕ್ಷ್ಮಿ ಒಬ್ಬಳು. ಧಾನ್ಯದೇವತೆ ಒಂದೇದೇಶಕ್ಕೆ ಸೀಮಿತವಾಗಿಲ್ಲ. ಕೃಷಿ ಪ್ರಧಾನವಾದ ಎಲ್ಲ ಸಂಸ್ಕೃತಿಗಳಲ್ಲಿ (ಶಿಷ್ಟ ಮತ್ತು ಜಾನಪದ) ಈ ಧಾನ್ಯದೇವತೆಯ ಕಲ್ಪನೆ ದಟ್ಟವಾಗಿ ಕಂಡುಬರುತ್ತದೆ.

ಜಾನಪದದಲ್ಲಿ 'ಕಾಳಮ್ಮ' ಧಾನ್ಯದೇವತೆಯಾಗಿ ಕಂಡುಬರುತ್ತಾಳೆ. ಕಾಳಿಯ ಉಗ್ರರೂಪಕ್ಕಿಂತ ಭಿನ್ನವಾದ ಮತ್ತು ಮೂರ್ತಿರಹಿತವಾದ ದೇವತೆ ಇದು. 'ಕಾಳಿನ ಗುಂಪಿ' 'ತುಂಬಿದ ತಂಬಿಗೆ' ಈ ದೇವತೆಯ ಪ್ರತೀಕ. ಸಾಮಾನ್ಯವಾಗಿ ಸುಗ್ಗಿಯ ನಂತರ

ಆಚರಿಸುವ ಕಾಳವ್ವನ ಹಬ್ಬ, ಕಾಳಿನ ರಕ್ಷಣೆಯಲ್ಲಿ ತುಂಬ ಪ್ರಧಾನವಾದದ್ದು.

ಈ ಧಾನ್ಯ ಪೂಜೆ ಮತ್ತು ಬೆಳೆಪೂಜೆ ಅವುಗಳಿಗೂ 'ಆತ್ಮ'ವಿದೆ ಎನ್ನುವ ನೆಲೆಯಿಂದ ಹುಟ್ಟಿಕೊಂಡದ್ದು. ಆದಿವಾಸಿ ಸಮುದಾಯಗಳಲ್ಲಿ ಒಂದು ಹೊಲದಲ್ಲಿ ಸಮೃದ್ಧ ಬೆಳೆ ಇದ್ದರೆ ಅದರಲ್ಲಿ ಧಾನ್ಯ ಮಾತೃವಿನ ಆತ್ಮವಿದೆ ಎನ್ನುವ ನಂಬಿಕೆ ಇದೆ. ಈ 'ಮಾತೃ' ಬೆಳೆಕಟಾವು ಮಾಡುವವರೆಗೂ ಎತ್ತಲೂ ಕದಲುವುದಿಲ್ಲ. ಆದರೆ ಬೆಳೆಕಟಾವು ಮಾಡುತ್ತ ನಡೆದಂತೆ ಪ್ರಾಣಭಯದಿಂದ ಅವಳು ಫಸಲಿನಿಂದ ಫಸಲಿಗೆ ವರ್ಗಾಂತರವಾಗುತ್ತ ಹೋಗುತ್ತಾಳೆ. ಹೀಗೆ ಸ್ಥಾನಾಂತರ ಮಾಡುತ್ತ ಮಾಡುತ್ತಾ ಕೊನೆ ಬೆಳೆಯಲ್ಲಿ ಅವಳು ಅಡಗುತ್ತಾಳೆಂದು ಈ ಕಾರಣಕ್ಕಾಗಿ ಅವಳು ಹೊರಗೆ ಹೋಗದಂತೆ ಹೊಲದಲ್ಲಿಯೇ ಸಾಯಿಸುತ್ತಾರೆ. ಈ ಸಾಯಿಸುವ ಕ್ರಮ ಕುತೂಹಲಕರವಾದಂತದ್ದು. ಉಳಿದ ಕೊನೆಬೆಳೆಯನ್ನು ಬಡಿದು ನೆಲಕ್ಕೆ ಕೆಡವಿ ಚಿತ್ರಹಿಂಸೆ ಮಾಡುವುದು ಒಂದು ರೀತಿ. ಕೊನೆ ಬೆಳೆ ಕೊಯ್ದ ವ್ಯಕ್ತಿಯನ್ನೇ ಯದ್ವಾತದ್ವಾ ಹೊಡೆಯುವುದು ಇನ್ನೊಂದು ರೀತಿ. ಇದರಿಂದ ದೇವಿ ಅದೇ ನೆಲದಲ್ಲಿಯೇ ಬಿದ್ದು ಪ್ರಾಣಬಿಡುವಳು. ಮುಂದಿನ ವರ್ಷ ಬೆಳೆ ಹುಲುಸಾಗುವುದು ಎನ್ನುವ ಆಶಯವಿದೆ. ಇಂದೂ ಕೂಡ ಕಬ್ಬುಕೊಯ್ದ ನೆಲದಲ್ಲಿ ಬೆಂಕಿ ಹಾಕುವ, ಸಣಬಿನಂತಹ ಸಸಿಗಳನ್ನು ಬೆಳೆಸಿ ಅದನ್ನು ಗದ್ದೆಯಲ್ಲಿಯೇ ಕೊಚ್ಚಿಗೊಬ್ಬರ ಮಾಡುವ ವಿಧಾನಗಳು ವೈಜ್ಞಾನಿಕವಾಗಿ ಏನೇ ಹೇಳಿದರೂ ಈ ಕ್ರಿಯೆಯನ್ನು ಮಾಡುವ ಕೃಷಿಕ ಜನರ ಮನದಲ್ಲಿ ಮೇಲ್ಕಂಡ ಚಿಂತನೆಯೇ ಬಹಳ ಪ್ರಮುಖವಾಗಿ ಕಂಡುಬರುತ್ತದೆ. ಜೋಳದ ವಿಷಯದಲ್ಲಿ ಇದು ಇನ್ನೂ ಡಿಫರೆಂಟೇ ಆಗಿ ಕಂಡುಬರುತ್ತದೆ. ಬೆಳೆ ಕೊಯ್ಯುವ ಮುಂಚೆಯೇ ಅಥವಾ ತೆನೆ ಮುರಿಯುವಾಗ ಸಮೃದ್ಧವಾಗಿ ಬೆಳೆದು ನಿಂತ ಇಡೀ ಬೆಳೆಯಲ್ಲಿಯೇ ಎದ್ದುಕಾಣುವಂತಹ ತೆನೆಗಳನ್ನು ಆರಿಸಿ ಕೊಯ್ಯುತ್ತಾರೆ. ಅದನ್ನು ಸಂರಕ್ಷಿಸಿ ಇಟ್ಟು ಮುಂದಿನ ವರ್ಷದ ಬಿತ್ತನೆಗೆ ಬಳಸಿಕೊಳ್ಳುತ್ತಾರೆ. ಇದಕ್ಕೆ 'ಬೀಜರಿಜೋಳ' ಎಂದು ಕರೆಯುತ್ತಾರೆ.

ರಾಶಿಬುತ್ತಿ ರೈತನ ಕೊನೆಯ ಚರಗವಾಗಿದೆ. ಭೂದೇವಿಗೆ ಆ ವರ್ಷದಲ್ಲಿ ರೈತ ಪೂಜಿಸುವ ಎಡೆಹಿಡಿಯುವ ಕೊನೆಯ ಪ್ರಕ್ರಿಯೆ ಈ ರಾಶಿಬುತ್ತಿಯಾಗಿದೆ. ವಾರ್ಷಿಕಾವರ್ತನದ ಕೊನೆಯ ಹೊಲದೂಟ ಮತ್ತು ಹೊಲದ ಪೂಜೆ ಇದು. ಮೊದಲ ಚೆರಗ ಜೋಕುಮಾರನ ಅಂಬಲಿ ಎರಡನೆಯದ್ದು ಸೀಗಿಹುಣ್ಣಿವಿ ಚರಗ. ಚರಗದ ಉದ್ದೇಶ ಫಲಸಮೃದ್ಧಿ.

ಒಂದು ಹಾಡಿನಲ್ಲಿ

ಬೆಚ್ಚು ಗಡಿಗೆಯು ಗುಂಡ ನುಚ್ಚು ಜೋಕನು ಚೆರಗ
ಬೆಚ್ಚಾಕಿ ಹೊಲಕೆ ಒಕ್ಕಲಿಗ । ಚೆರಗೊಗೆದ
ಬಿಚ್ಚಿಡಲು ಹುಲುಸು ಹೊಲದೊಳಗೆ೧೬

ಕೆಲವೊಂದು ಚೆರಗಗಳನ್ನು ಭೂಮಿಯ ಮೇಲೆ ಒಗೆದರೆ ಜೋಕುಮಾರನ ಅಂಬಲಿಯನ್ನು ನೆಲದೊಳಗೆ ಮುಚ್ಚುತ್ತಾರೆ. ಜೋಕುಮಾರನ ಹಬ್ಬದ ಸಂದರ್ಭದಲ್ಲಿ ಬೆಳೆ ಇನ್ನೂ ಚಿಕ್ಕದಾಗಿರುತ್ತದೆ. ಭೂಮಿಯ ಮೇಲೆ ಅಣ್ಣಬಿದ್ದರೆ ಪಶುಪಕ್ಷಿ ತಿನ್ನುವುದರಿಂದ ಹುಲುಸು ಹೋಗುತ್ತದೆ. ಹೀಗಾಗಿ ಭೂಮಿಯಲ್ಲಿ ಅದನ್ನು ಮುಚ್ಚುವರು. ಉಳಿದ ಚೆರಗದ ಸಂದರ್ಭದಲ್ಲಿ ಬೆಳೆ ಎತ್ತರವಾಗಿ ಭೂಮಿ ಕಾಣದೆ ಇರುತ್ತದೆ. ಅದು ಅಲ್ಲದೆ ಜೋಳ ತೆನೆ ಹಾಕಿರುತ್ತದೆ. ಹೀಗಾಗಿ ಹಕ್ಕಿ ಪಕ್ಷಿಗಳು ಕೆಳಗೆ ಬಿದ್ದ ಅಣ್ಣಕ್ಕೆ ಬಾಯಿ ಹಾಕುವ ಬದಲು ಮೇಲಿದ್ದ ತೆನೆಗಳನ್ನು ತಿಂದು ಹೋಗುತ್ತವೆ ಎನ್ನುವ ತರ್ಕ ಇಲ್ಲಿದೆ.

ಚೆರಗದ ಹಿಂದಿರುವ ಇನ್ನೊಂದು ಅರ್ಥ. ಸಂಸ್ಕೃತಿಯ ವಿವಿಧ ಸಂಕಥನಗಳನ್ನು ದಟ್ಟವಾಗಿ ಕಟ್ಟಿಕೊಡುತ್ತದೆ. ಆರ್ಯದೇವತೆಗಳೆಲ್ಲ ಆಂತರಿಕ್ಷ ದೇವತೆಗಳು. ಅಗ್ನಿ ಧೂಮದ ಮೂಲಕ ಹವಿಸ್ಸನ್ನು ಅವರಿಗೆ ತಲುಪಿಸುತ್ತಾರೆ. ದ್ರಾವಿಡ ದೇವತೆಗಳು ಭೂದೇವತೆಗಳು. ಹೂಳುವಿಕೆ ಮತ್ತು ರಕ್ತ ಚೆಲ್ಲುವ ಕ್ರಿಯೆಯ ಮೂಲಕ ಭೂದೇವಿಯನ್ನು ಸಂತೃಪ್ತಿಗೊಳಿಸುತ್ತಾರೆ.

ರಕ್ತ ಮೊದಲಿನಿಂದಲೂ ಜೀವದ್ರವ್ಯದ ಸಂಕೇತವಾಗಿ ಪರಿಗಣಿತವಾಗುತ್ತ ಬಂದಿದೆ. ಅರ್ಪಣೆಯಾದ ಜೀವಿಯ ರಕ್ತಮಾಂಸಗಳನ್ನು ಭೂಮಿಯಲ್ಲಿ ಹೂಳುವ ಮೂಲಕ ಆ ಜೀವಿಯ ಚೈತನ್ಯ ಭೂಮಿಯನ್ನು ಸೇರುವುದು. ಮನುಷ್ಯ ಅದನ್ನು ಸೇವಿಸಿದಾಗ ವೀರ್ಯ ರೂಪದಲ್ಲಿ ಅದು ಸಂಚಿತಗೊಳ್ಳುತ್ತದೆ. ಅವನ ಮೂಲಕ ಅದು ಸ್ತ್ರೀಯರಲ್ಲಿ ಸೇರಿ ಮತ್ತೊಂದು ಜೀವಿಯ ಹುಟ್ಟಿಗೆ ಕಾರಣವಾಗುತ್ತದೆ. ಈ ಸಂಕೀರ್ಣ ನಂಬಿಕೆಯೇ ಇಂದು ಚೆರಗದ ಮುಂದುವರಿಕೆಯಲ್ಲಿ ಅಡಕವಾಗಿದೆ. 'ಸಮೃದ್ಧಿ', 'ಸಂತಾನ' ಈ ಆಚರಣೆಯ ಹಿಂದಿರುವ ಗಟ್ಟಿನೆಲೆ. ಹಿಂದೆ ಹೇಳಿದಂತೆ ಆತ್ಮದ ಪರಿಕಲ್ಪನೆ ಬಹುಶಃ ಈ ರೀತಿಯಿಂದ ಅವರಲ್ಲಿ ಹುಟ್ಟಿಕೊಂಡಿರಬೇಕು. ಒಂದು ಚೇತನದ ಸಾವಿನಿಂದ ಮತ್ತೊಂದು ಚೇತನದ ಹುಟ್ಟಿನ ಕ್ರಿಯೆ ಅವರಲ್ಲಿ ವಿಸ್ಮಯ ಮತ್ತು ಭಯಭಕ್ತಿಗಳೆರಡನ್ನು ಹುಟ್ಟುಹಾಕಿದೆ ಎನ್ನಬಹುದು.

ಚೆರಗದ ಉದ್ದೇಶ ಮೂರು ರೀತಿಯದು. 'ಸಮೃದ್ಧಿ', 'ರೋಗಪರಿಹಾರ', 'ಹರಕೆ' ಅಥವಾ 'ಕೃತಜ್ಞತಾಭಾವ'. ಆರಂಭದ ಚೆರಗಗಳು ದೇವತೆಯನ್ನು ಸುಪ್ರೀತಗೊಳಿಸುವ ಕ್ರಿಯೆಗಳಾದರೆ ರಾಶಿಬುತ್ತಿಯ ಚೆರಗ ಕಾರ್ಯಸಿದ್ಧಿಯಾದ ಮೇಲೆ ಪ್ರತಿಯಾಗಿ ಭೂದೇವಿಗೆ ಸಲ್ಲಿಸುವ ಕೃತಜ್ಞತೆಯಾಗಿದೆ.

ಭಯಭಕ್ತಿಯ ಧಾರ್ಮಿಕ ಭಾವನೆಯ ಆಚರಣೆಯ ಕಟ್ಟುಕಟ್ಟಳೆಗಳ ದಟ್ಟ ಹೊದಿಕೆ ರಾಶಿಬುತ್ತಿಯ ಪ್ರಕ್ರಿಯೆಯಾಗಿದ್ದರೂ ಹಾಸ್ಯ ವಿಡಂಬಣೆಯಂತಹ ಗುಣಗಳಿಗೇನು

ಒಕ್ಕಲಿಗನಲ್ಲಿ ಬರ ಇಲ್ಲ. ಪಕ್ಕದ ಹೊಲದವರು ತಮ್ಮ ಹೊಲದ ಲಕ್ಷ್ಮಿಗೆ ಶಾಂತಿ ಮಾಡದ, ಪೂಜೆ ಮಾಡದ, ಎಡೆ ಕೊಡದ ಪ್ರಸಂಗವನ್ನು ಎತ್ತಿಕೊಂಡು ಹೊಲದವನ ಜೊತೆ ಆತನ ದೇವತೆಯನ್ನೂ ಟೀಕಿಸುವ ಹಾಸ್ಯಮಾಡುವ ರೋಮಾಂಚಕಾರಿಯಾದ ಸನ್ನಿವೇಶವನ್ನು ಗಮನಿಸಬಹುದಾಗಿದೆ.

ಉದಾಹರಣೆಗೆ

ಒಬ್ಬ: ಆಚಿಹೊಲ್ದಾನ ಲಚಿಮಿ ಇಚಿಕ್ಯಾಕ ಬಂದಾಳ
ಇನ್ನೊಬ್ಬ: ತಂಬಾಕ ನೆವಮಾಡಿ ನುಂಗಾಕ ಬಂದಾಳ
ಒಬ್ಬ: ಆಚಿ ಹೊಲ್ದಾನ ಲಕ್ಷ್ಮಿ ಇಚಿಕ್ಯಾಕ ಹಾರ್‍ಯಾಳ
ಇನ್ನೊಬ್ಬ: ರಾಶಿಬುತ್ತಿ ಕಿಚಡಿಗಿ ಆಶೆ ಮಾಡಿ ಬಂದಾಳ

ಎನ್ನುವಲ್ಲಿ ದೇವರೂ ಕೂಡ ಆಶೆ ಬುರುಕರು. ಊಟ ಇದ್ದಲ್ಲಿಗೆ ಓಡಿಬರುವವರು ಎನ್ನುವ ವ್ಯಂಗ ಇದೆ. ಇಂತಹ ಮೊನಚು ವ್ಯಂಗಗಳೂ ಕೂಡ ಯಾರ ತೇಜೋವಧೆಯನ್ನು ಮಾಡದೆ ಆರೋಗ್ಯಕರ ಸ್ಥಿತಿಯಲ್ಲಿ ಸಂವಹನವಾಗುವುದು ಇಲ್ಲಿ ಕಂಡುಬರುತ್ತದೆ.

ಈ ರೀತಿ ಪೂಜೆ ಪುನಸ್ಕಾರ ಚೆರಗ ಮುಗಿದ ಕೂಡಲೆ ಊಟ ಆರಂಭವಾಗುತ್ತದೆ. ಮೊದಲಿಗೆ ಬಾಲಮುತ್ತೈದೆಯರ ಉಡಿತುಂಬಿ ಜಂಗಮರನ್ನು ಉಣಿಸುತ್ತಾರೆ. ಆ ಮೇಲೆ ಉಳಿದ ಮಂದಿಗೆಲ್ಲ ಊಟಬಡಿಸುತ್ತಾರೆ. ಯಾವುದೇ ಜಾತಿ ವರ್ಗದ ಪ್ರಜ್ಞೆ ಈ ಸಂದರ್ಭದಲ್ಲಿ ಕೆಲಸ ಮಾಡುವುದಿಲ್ಲ. ಸಾಮೂಹಿಕ ಸಂತೋಷ ಇಲ್ಲಿ ಪ್ರಧಾನವಾಗಿ ಕಂಡುಬರುತ್ತದೆ.

ಶರಣರ ಕಾಯಕದಾಸೋಹದ ಪ್ರಭಾವವನ್ನು ಇಲ್ಲಿ ಪ್ರಮುಖವಾಗಿ ಗುರುತಿಸ ಬಹುದು. ಶರಣರಲ್ಲಿಯೂ, ಕೂಡ ಇಲಿಹಾಳ ಬೊಮ್ಮಯ್ಯ, ಇಳೆಯಾಂಡ ಗುಡಿಮಾರ ನಂತರದ ಶರಣಬಸಪ್ಪ ಅಪ್ಪಗಳಂತಹ ಮಹಾನ್ ದಾಸೋಹಿ ರೈತಶರಣರನ್ನು ಹೆಸರಿಸ ಬಹುದು.

ಪ್ರತಿಯೊಬ್ಬರು ಶ್ರಮ ಮಾಡುವ ಮೂಲಕ ಸ್ವಾವಲಂಬನೆಯ ಬದುಕನ್ನು, ಧಾರ್ಮಿಕ ಮತ್ತು ಆರ್ಥಿಕ ಸಮಾನತೆಯನ್ನು ಗಳಿಸಬೇಕೆನ್ನುವ ಶರಣ ಸಿದ್ಧಾಂತ, ದಾನಕ್ಕೆ ಬರುವ ಪ್ರತಿಯೊಬ್ಬ ಆಯಗಾರ ವ್ಯಕ್ತಿಗಳಿಗೂ ಅನ್ವಯಿಸುತ್ತದೆ. ಕಣಕ್ಕೆ ಬಂದವರು ಯಾರೂ ಖಾಲಿಕುಂತು ಉಂಡು ಹೋಗುವುದಿಲ್ಲ. ಬದಲಾಗಿ ಸ್ವಯಂ ಪ್ರೇರಣೆಯಿಂದ ತಮಗೆ ನೀಗಿದ ಕೆಲಸಗಳನ್ನು ಮಾಡಿ ದಾನ ಪಡೆಯುವ, ಊಟಮಾಡುವ ಪ್ರಕ್ರಿಯೆಯಲ್ಲಿ ತೊಡಗುವುದು ಕಂಡುಬರುತ್ತದೆ. ಒಂದು ಜಾನಪದ ಹಾಡಿನಂತೆ-'

ಕಣದೊಳಗೆ ಒಕ್ಕಲಿಗ ದನಿಯೆತ್ತಿ ಬೆಳತನಕ
ದನಿಯೆಂದು ಹಾಡಿ ಬೆಳಕೊಂಡು। ಒಕ್ಕುವನು
ಕಣರಾಶಿ ಉಣಿಸಿ ಜಂಗಮಕೆ॥೨

ಎನ್ನುವ ವಿವರ ಹಂಚಿಉಣ್ಣುವ ಪ್ರವೃತ್ತಿಯನ್ನು ಸ್ಪಷ್ಟವಾಗಿಸುತ್ತದೆ. ಇನ್ನೊಂದು ಹಾಡುಕೂಡ-

ನೆನಸಿ ಕುಣಿಕುಣಿದಾಡಿ ತೆನಿರಾಶಿ ಹಂತಿಯೊಳು
ಬಸದ ಹುಲಸೆಲ್ಲ ಕಣಕೊರಗಿ । ಚೌಡಯ್ಯ
ಉಣಿಸೋ ಬೆಳುವಲದ ಬೆಳೆಹೊಕ್ಕು[೧೮]

ತುಂಬ ಮಾರ್ಮಿಕವಾದ ಮಾತಿದು. ರಾತ್ರಿಯಿಡೀ ಸಂತೋಷದಿಂದ ಹಾಡಿನಲಿದು ಹಂತಿ ತಿರುವಿದಾಗ ಬೆಳಗಾಗುತ್ತಲೇ ಕಾಳು-ಕಂಕಿ ಬೇರ್ಪಡುತ್ತದೆ. ಸುಂಕು ಕಣದತೆಳಗೆ ಒರಗಿಕೊಂಡಿರುತ್ತದೆ. ಅಂದರೆ ರಾಶಿ ತಯಾರಾದ ಹಂತವನ್ನು ಇದು ಸೂಚಿಸುತ್ತದೆ. ಸಂಪೂರ್ಣ ಕಂಕಿ ಕಡಿಗಾದ ಮೇಲೆ ಬರೀಕಾಳು ಮತ್ತು ಸುಂಕ ಎರಡೆ ಕಣದಲ್ಲಿರುತ್ತವೆ. ಆವಾಗ ಎತ್ತಿನಕಾಲುಗಳು ಜಾರಲು ಸುರುವಾಗುತ್ತವೆ. 'ಸುಂಕ' ನಯವಾಗಿರುವುದರಿಂದ ಅದು ಎತ್ತಿನ ಬಿರುಸಾದ ಕೊಳಗವನ್ನು ಹೊರಲಾರದೆ ಜಾರಿಸಿ ಬಿಡುತ್ತದೆ. ಹೀಗೆ ಕಾಲು ಜಾರಲು ಆರಂಭಿಸಿದಾಗ ರೈತ ತೆನೆಸುರಿತವೆಂದು ಹಂತಿಬಿಡುತ್ತಾನೆ. ಆ ಮೇಲೆ ಈ ರಾಶಿಬುತ್ತಿ ಚಟುವಟಿಕೆಗಳು ಪ್ರಾರಂಭವಾಗುತ್ತವೆ.

ಇಲ್ಲಿ ಬರೀ ಊಟದ ಪ್ರಶ್ನೆಯಾಗಲೀ ದಾನದ ಪ್ರಶ್ನೆಯಾಗಲೀ ಇಲ್ಲ. ಉತ್ಪಾದನೆ ವ್ಯಕ್ತಿಯದಾದರೂ, ಅದರ ಫಲ ವ್ಯಷ್ಟಿಗೂ ಸಿಗಬೇಕು ಎನ್ನುವ ಉದಾತ್ತತೆ ಇದೆ. ಊಟವಾದ ಮೇಲೆ ಕೆಲವರು ಮನೆಗೆ ಬರುತ್ತಾರೆ. ಇನ್ನು ಕೆಲವರು ಕಣದಲ್ಲಿಯೇ ಉಳಿಯುತ್ತಾರೆ. ಉಳಿದವರು ಬೆಳಿಗ್ಗೆ ರಾಶಿತುಂಬಲು ಸಹಕರಿಸುತ್ತಾರೆ. ಎತ್ತುಗಾಡಿ ಇದ್ದವರು ರಾಶಿಯನ್ನು ಮನೆಗೆ ತಂದು ಹಚ್ಚಿ ಹೋಗುತ್ತಾರೆ.

ರಾಶಿಬುತ್ತಿಯಲ್ಲಿ ಒಂದೊಂದು ಸಲ ಅನಾಹುತಗಳು ಸಂಭವಿಸುವುದುಂಟು. ತಮ ಗಾಗದವರನ್ನು ಪ್ರೀತಿಯಿಂದ ಕರೆದು ಊಟದಲ್ಲಿ ಅಥವಾ ಸರಾಯಿಯಲ್ಲಿ ವಿಷಬೆರೆಸಿ ಸಾಯಿಸುವುದೂ ಕಂಡುಬರುತ್ತದೆ. ಇಂತಹ ಆತಂಕದ ಸನ್ನಿವೇಶಗಳು ಅಪರೂಪ.

**ರಾಶಿತುಂಬುವ ಕಾಲಾವಧಿ :**

ರಾಶಿ ತುಂಬಲಿಕ್ಕೆ ರೈತ ತನ್ನದೇ ಆದ ಕಾಲಬದ್ಧತೆಯನ್ನು ಇಟ್ಟುಕೊಂಡಿದ್ದಾನೆ. ಅಂತಹ ವೇಳೆಯಲ್ಲಿ ರಾಶಿತುಂಬಿದರೆ ರಾಶಿ ಹುಲುಸಾಗುತ್ತದೆನ್ನುವ ನಂಬಿಕೆ ಅವನದು. ಒಂದು ಹಾಡಿನಲ್ಲಿ

ಕನ್ನಬೇಟೆಯಾಡಿ, ಹೊನ್ನ ಬೆಟ್ಟವ ತಿರುಗಿ
ಪನ್ನಂಗ ಧರಗ ಎಡೆಮಾಡಿ । ನರಿಕೂಗಿ
ಸಣ್ಣರಾಸ್ಯುಕ್ಕೆ ಕಣತುಂಬಿ[೧೯]

ಹಾಡಿನ ಒಟ್ಟು ಸಂದರ್ಭ ಬೆಳಗಿನ ಜಾವವನ್ನು ಸೂಚಿಸುತ್ತದೆ. ಬೇಡರ ಕನ್ನಯ್ಯ

ರಾತ್ರಿಯೆಲ್ಲ ಕಾಡಿನಲ್ಲಿ ಅಲೆದು ಬೇಟೆಯಾಡಿ ನಸುಕಿನಲ್ಲಿ ಶಿವನಿಗೆ ಎಡೆಮಾಡಿ ಕೃತಾರ್ಥನಾಗುವ ಮತ್ತು ನರಿತಿಂದುಂಡು ಗೂಡಿಗೆ ಹೋಗುವ ಸಮಯ ಒಂದೇಯಾಗಿರುತ್ತದೆ. ನರಿಕೂಗು ಒಕ್ಕಲಿಗನಿಗೆ ಅಲಾರಾಮ್ ಇದ್ದಂತೆ. ಅದರಿಂದ ಎಚ್ಚೆತ್ತು ಮುಂದಿನ ಕಾರ್ಯಕಲಾಪಗಳಿಗೆ ಕೃಷಿಕ ಅಣಿಯಾಗುತ್ತಾನೆ. ನಿಸರ್ಗದಲ್ಲಿ ಬದುಕುವ ಈತ ನಿಸರ್ಗದ ನಿಯಮಗಳಿಗೆ ಹೊಂದಿಕೊಳ್ಳುವ ಈ ಪ್ರಕ್ರಿಯೆ ತುಂಬ ಮಹತ್ವದ್ದು.

ಬೆಳಕು ಯಾವಾಗಲೂ ರಾತ್ರಿಗೆ ಹೊರತಾದದ್ದು ಅದು ಎಂತಹ ಬೆಳಕು ಎಂದರೆ ಮುಂಗೋಳಿ ಕೂಗುವ ತಂಗಾಳಿ ಬೀಸುವ ಸೊಂಪಾದ ಹೊತ್ತು. ಈ ಹೊತ್ತಿನಲ್ಲಿ ಯಾವುದೇ ರೀತಿಯ ತೊಂದರೆಗಳಾಗುವ ಭಯಂಕರತೆಗಳ ಹಾವಳಿ ಇರುವುದಿಲ್ಲ. ಅದಕ್ಕೆ ರಾತ್ರಿಯಿಡೀ ರಾಶಿಗೆ ಕರಿಕಟ್ಟಿ ಪೂಜೆ ಮಾಡಿ ಈ ಭಯಂಕರತೆಗಳಿಂದ ಕಾಪಾಡಿ ಅವುಗಳ ಅಟ್ಟಹಾಸ ನಿಲ್ಲುವ ವೇಳೆಯಲ್ಲಿ ರಾಶಿಯನ್ನು ತುಂಬುತ್ತಾರೆ. ಬೆಳಗಿನ ಜಾವ ಬಿಟ್ಟರೆ ಗೋಧೂಳಿ ಸಮಯವನ್ನು ಈ ಪ್ರಕ್ರಿಯೆಗೆ ಆಯ್ಕೆ ಮಾಡಿಕೊಳ್ಳುತ್ತಾರೆ. ನಡುರಾತ್ರಿ ನಡುಹಗಲು ಇದಕ್ಕೆ ನಿಷಿದ್ಧ.

**ರಾಶಿ ತುಂಬುವ ವಿಧಾನ :**

ರಾಶಿ ತುಂಬುವಲ್ಲಿ ಕುತೂಹಲಕಾರಿಯಾದ ನಿಯಮಗಳಿವೆ. ಕಣದಲ್ಲಿರುವವರೆಲ್ಲರೂ ತಲೆಯ ಮೇಲೆ ಟೊಪ್ಪಿಗೆ ಹಾಕಿರಬೇಕು. ಯಾರೂ ಬಕ್ಕತಲೆಯಲ್ಲಿ ಇರಕೂಡದು. ರಾಶಿಯನ್ನು ನೇರವಾಗಿ ಚೀಲಹಚ್ಚಿತುಂಬದೇ ಕರಿಕಂಬಳಿ ಚಳೆಮಾಡಿ ತುಂಬುತ್ತಾರೆ. ತುಂಬುವಾಗ ಕೈಯಿಂದ ರಾಶಿಯನ್ನು ಬಳಸುವುದಿಲ್ಲ ಬದಲಾಗಿ ಸೆಳ್ಳಿನಿಂದ ಕಂಬಳಿಗೆ ಎಳೆಯುತ್ತಾರೆ. ಆಮೇಲೆ ಕಂಬಳಿಯ ನಾಲ್ಕು ಮೂಲೆಹಿಡಿದು ನಾಲ್ಕು ಜನ ಎತ್ತಿ ಚೀಲಕ್ಕೆ ಸುರಿಯುತ್ತಾರೆ. ಅವರ ಅಳತೆ ಎಂದರೆ ಅಳತೆ. ಕಂಬಳಿಯ ಒಂದು ಚಳೆ (ಮಟ್ಟಿ) ಒಂದು ಚೀಲವಾಗುತ್ತದೆ. ರಾಶಿಯನ್ನು ಒಂದೇ ಕಡೆಯಿಂದ ತುಂಬುವುದಿಲ್ಲ. ಸುತ್ತಲು ತುಂಬುತ್ತಾರೆ. ಒಮ್ಮೊಮ್ಮೆ ಒಂದೇ ಕಡೆಯಿಂದಲೂ ತುಂಬುವುದೂ ಇದೆ. ಇದು ರೈತನ ನಂಬಿಕೆಯ ಮೇಲೆ ಹೋಗುತ್ತದೆ. ರಾಶಿಯ ನೆತ್ತಿಯನ್ನು ನೇರವಾಗಿ ಒಡೆಯುವುದಿಲ್ಲ ಮಗ್ಗಲಿನಿಂದ ತುಂಬುತ್ತ ಹೋಗುತ್ತಾರೆ.

ಸಂಪೂರ್ಣ ತುಂಬಿದ ಮೇಲೆ ದಾನದ ಕ್ರಿಯೆ ನಡೆಯುತ್ತದೆ. ಕೆಲವು ಕಡೆಗೆ ರಾಶಿ ತುಂಬುವ ಮೊದಲೇ ದಾನಕೊಡುವುದು ಇದೆ. ಇದು ತೀರ ಅಪರೂಪ. ಬಹುಶಃ ಈ ವಿಧಾನ ಆರಂಭದ ದಿನಗಳಲ್ಲಿ ಇರಬಹುದು. ಇಂದಿನ ಮನುಷ್ಯನ ಸ್ವಭಾವ ಹಂಚಿ ತಿನ್ನುವುದಲ್ಲ ತಿಂದು ಉಳಿದದ್ದನ್ನು ಹಂಚುವುದು. ಹೀಗಾಗಿ ಒಳ್ಳೆ ಕಾಳುಗಳನ್ನೆಲ್ಲ ತಾನು ತುಂಬಿಕೊಂಡು ಅಳಿದುಳಿದ ಸೆರಗು ಮುರುಗನ್ನು, ನಿರುಪಯುಕ್ತ ವಸ್ತುಗಳನ್ನು ಕೊಟ್ಟು

ದಾನಮಾಡಿದೆನೆನ್ನುವ ಹೆಮ್ಮೆಯಿಂದ ಬೀಗುವುದುಂಟು. ಬೂದನರಾಶಿ ದಾನದ ವಸ್ತುವಾಗಿರುತ್ತದೆ.

ಒಂದು ತಾಳದ ಬೆಳೆಯು ಬಂದವರಿಗಿಲ್ಲೆನ್ನೆ
ಮುಂದು ಕೊಡುಗೈಯು ಒಕ್ಕಲಿಗ । ನಾಡೋಳು
ಹೊಂದಿ ದಾಸೋಹ ರೈತನಿಗೆ[೨೦]

ಎನ್ನುವಲ್ಲಿ ದಾನ ಪ್ರಕ್ರಿಯೆಯ ಅರ್ಥವಾಗುತ್ತದೆ.

ಕುಣಿಕುಣಿದು ಚೌಡಯ್ಯ ಮಣಿಮಣಿದು ಹಾಡಿದರ
ಕಣತುಂಬಿ ರಾಶಿ ಹೊರಸೂಸಿ । ಒಕ್ಕಲಿಗ
ಮಣಿದು ದಾಸೋಹ ಹೊಸಮತಕೆ[೨೧]

ರಾಶಿ ಹೇಗೆ ಹುಲುಸಾಗುವುದೋ ಹಾಗೆ ಸಂತೋಷದಿಂದ ದಾನ ಮಾಡುವ ವಿಧಾನವನ್ನು ಹಾಡು ತಿಳಿಸುತ್ತದೆ. ಹೆಚ್ಚು ಬೆಳೆದರೆ ಹೆಚ್ಚು, ಕಡಿಮೆ ಬೆಳೆದರೆ ಕಡಿಮೆ. ಆದರೆ ಯಾರನ್ನು ಹಾಗೆ ಕಳಿಸುವುದಿಲ್ಲ. ಬಂದದ್ದರಲ್ಲಿ ಎಲ್ಲರಿಗೂ ಕೊಟ್ಟು ಉಳಿದದ್ದನ್ನು ರೈತ ಒಯ್ಯುತ್ತಾನೆ.

ಇತ್ತೀಚಿನ ದಿನಗಳಲ್ಲಿ ಈ ದಾನಕ್ರಿಯೆ ಸಂಪೂರ್ಣ ವ್ಯಾಪಾರವಾಗಿದೆ. ಹಂಚಿತಿನ್ನುವ ಸಂತೋಷದ ಕ್ಷಣಗಳನ್ನು ರಾಶಿಬುತ್ತಿ ಸಂಕೇತಿಸಿದರೂ ದಾನಕೊಡುತ್ತೇನೆನ್ನುವ ಹಂಗಿನಿಂದ ದಾನಕ್ಕೆ ಬಂದ ಆಯಗಾರರನ್ನೇ ಕಣದಲ್ಲಿ ದುಡಿಸಿಕೊಳ್ಳುವವರನ್ನು ಕಾಣುತ್ತೇವೆ. ಆಯಗಾರರಲ್ಲೂ ಸ್ವಾರ್ಥ ಮನೋಭಾವವನ್ನು ಕಾಣಬಹುದು. ಕೆಲಸ ಮಾಡಿದರೆ ದಾನವನ್ನು ಹೆಚ್ಚುಕೊಟ್ಟಾನು ಎಂಬುದು ಅವರ ಆಸೆಯಾಗಿರುತ್ತದೆ. ದಾನಕೊಡಬೇಕಾದರೆ ಕೆಲಸ ಹೆಚ್ಚು ಮಾಡಬೇಕು ಎನ್ನುವ ಸಾಟಿಸಾಟಿ ಪ್ರವೃತ್ತಿಯನ್ನು ಕಾಣಬಹುದು. 'ದಾನ' 'ಧರ್ಮ'ವಾಗದೆ ಅದು ಶ್ರಮದಭಾಗವಾಗಿರುವುದನ್ನು ಇಲ್ಲಿ ಸ್ಪಷ್ಟವಾಗಿ ಗುರುತಿಸಬಹುದು. ಮನುಷ್ಯನಲ್ಲಿಯ ಸಾಮುದಾಯಿಕ ಕ್ರಿಯೆಗಳು ಮಾನವೀಯ ಸಂಬಂಧಗಳು ಬಿದ್ದುಹೋಗಿ ಗಳಿಕೆಯೇ ಮುಖ್ಯವಾದ, ಪರರಿಗೆಕೊಡದ ಸಂಗ್ರಹಿತ ಗುಣಗಳನ್ನು ಇದು ಸ್ಪಷ್ಟಪಡಿಸುತ್ತದೆ. ಕಲುಷಿತಗೊಂಡ ಮನಸ್ಸಿನ ಪ್ರತಿರೂಪವನ್ನು ಇಂಥ ವಿವರಗಳು ಕಟ್ಟಿಕೊಡುತ್ತವೆ.

**೩. ಈ ಸಂದರ್ಭದ ಕೆಲವು ಮುಖ್ಯ ಬಳಕೆ ಪರಿಕರಗಳು :**

೧. ಬೂದ :

ಈ ಬೂದನನ್ನು ಬೂದಯ್ಯ ಭೂದಪ್ಪ, ಬುದ್ದಪ್ಪ ಎಂದು ಕರೆಯುತ್ತಾರೆ. 'ಬುದ್ದಪ್ಪ'

ಎಂದರೆ 'ಬುದ್ಧಿವಂತ' ಎಂದು ಅರ್ಥವಿದೆ. ಕಣದಲ್ಲಿ ಈ ಬೂದನನ್ನು ಹೆಂಡಿಯಿಂದ ಮಾಡುತ್ತಾರೆ. ಹಂತಿಯ ಕೊನೆಯ ಗಳಿಗೆಯಲ್ಲಿ ಕೊನೆ ಎತ್ತಿನ ಹೆಂಡಿ ಹಿಡಿದು ಅದನ್ನು ಬೂದಿಹಾಕಿ ಹದಮಾಡಿ ಗೋಲಾಕಾರದ ಉದ್ದವಾದ ಉಂಡೆ ಮಾಡುತ್ತಾರೆ. ತಳ ಅಗಲವಾಗಿದ್ದು ಮೇಲಕ್ಕೆ ಹೋದಂತೆ ಸಣ್ಣದಾಗುತ್ತ ಹೋಗುತ್ತದೆ. ಎತ್ತರ ಮೂರರಿಂದ ನಾಲ್ಕು ಇಂಚು ಇರುತ್ತದೆ. ಇದರ ತುದಿಗೆ ಹಂತಿಕಟ್ಟಿದ ಎಲ್ಲ ಎತ್ತಿನ ಎರಡೆರಡು ಜವೆಗಳನ್ನು ಕಿತ್ತು ಚುಚ್ಚುತ್ತಾರೆ. ರಾಶಿಮುಗಿಯುವವರೆಗೆ ಇದು ಮಹತ್ವದ ಪಾತ್ರವಹಿಸುತ್ತದೆ. ಹೀಗೆ ಬೂದ ತಯಾರಾದ ಮೇಲೆ ಬೂದ ಮತ್ತು ರ್‍ಯಾಗೋಲನ್ನು ಒಬ್ಬ ಹಿಡಿದುಕೊಂಡರೆ ಇನ್ನೊಬ್ಬ ಸೆಳ್ಳು ಮತ್ತು ನೀರನ್ನು ಹಿಡಿದುಕೊಂಡು ಕಣದ ಸುತ್ತ ಹುಲ್ಬುಲಿಗೋ ಎನ್ನುತ್ತ ಐದು ಸುತ್ತು ಸುತ್ತುತ್ತಾರೆ. ಹೀಗೆ ಸುತ್ತುವಾಗ ಸೆಳ್ಳು ಮತ್ತು ನೀರು ಹಿಡಿದವ ಸೆಳ್ಳಿಗೆ ನೀರು ಹಾಕುತ್ತ ಹುಲ್ಬುಲಿಗೋ ಅನ್ನುವಾಗ ಅದನ್ನು ಕಣದ ಸುತ್ತ ಸಿಂಪಡಿಸುತ್ತ ಹೋಗುತ್ತಾರೆ. ರಾಶಿಮುಗಿಯುವವರೆಗೆ ಈ ಬೂದ ಕಣದಲ್ಲಿಯೇ ಇರುತ್ತಾನೆ.

ಮಲೆನಾಡಿನಲ್ಲಿ ಸಗಣಿಯ ಉಂಡೆಮಾಡಿ ಗರಿಕೆಯನ್ನು ತಲೆಮೇಲೆ ಚುಚ್ಚಿ ಮಾಡಿದ ಮೂರ್ತಿಯನ್ನು 'ವಿನಾಯಕ', 'ಬೆನಕ' ಎಂದು ಕರೆಯುತ್ತಾರೆ. ರಾಶಿ ತುಂಬಿದ ಸಂದರ್ಭದಲ್ಲಿ ಇದಕ್ಕೆ ಪೂಜೆ ಮಾಡಿ ರಾಶಿಹುಲುಸಾಗಲೆಂದು ಪ್ರಾರ್ಥಿಸುವ ಪದ್ಧತಿ ಇದೆ. ಆಕಾರ, ಆರಾಧನೆ ಉತ್ತರ ಕರ್ನಾಟಕ ಮತ್ತು ಮಲೆನಾಡು ಪ್ರದೇಶದಲ್ಲಿ ಒಂದೇ ಹೆಸರು ಮಾತ್ರ ಬೇರೆಯಾಗಿ ಕಂಡುಬರುತ್ತದೆ. ಬೂದ ಎರಡು ಪ್ರದೇಶದಲ್ಲಿ 'ಹುಲುಸಿ'ನ ದೇವತೆಯಾಗಿಯೇ ಗುರುತಿಸಿಕೊಳ್ಳುತ್ತದೆ.

ಈ ಬೂದ ಅಲ್ಲಮನ ಅವತಾರವೆಂದು ಬಿ. ಎಸ್. ಗದ್ದಿಗಿಮಠರು ಹೇಳುತ್ತಾರೆ (೧೪೧:೧೯೮೬).

ಬೂದ್ದಯ್ಯ ಬೂದಯ್ಯ ಎದ್ದು ತೂರಿದ ಮೆದವ
ಬಿದ್ದರಾಶೆಲ್ಲ ವಚನಗಳೋ। ಅಲ್ಲಮಗ
ಹುದ್ದೆ ಕಲ್ಯಾಣ ಗದುಗೆ[೨೨]

ಇಲ್ಲಿ ಬುದ್ದಯ್ಯ ಬೂದಯ್ಯ ಅಲ್ಲಮನ ಹೆಸರುಗಳು ಬೇರೆ ಬೇರೆಯಾಗಿಯೇ ಪ್ರಸ್ತಾಪವಾಗಿರುವ ಕಾರಣ ಬಹುಶಃ ಈ ಬೂದ ಅಲ್ಲಮ ಆಗಿಲ್ಲವೆಂದು ಹೇಳಬಹುದು. ಯಾಕೆಂದರೆ ಬೂದ ಹುಟ್ಟುವುದು ಸಗಣಿಯಲ್ಲಿ. ಅದೂ ಅದೊಂದು ಸಮೃದ್ಧಿಯ ಸಂಕೇತವಾಗಿ ಕಣದಲ್ಲಿ ಕಾಣಿಸಿಕೊಳ್ಳುತ್ತದೆ. ಕಣದ ರಾಶಿಯಲ್ಲಿ ಇದನ್ನು ಮುಚ್ಚಿಡುತ್ತಾರೆ. ರಾಶಿಮುಗಿಯುವವರೆಗೂ ಅದನ್ನು ಹೊರತೆಗೆಯುವುದಿಲ್ಲ ಅಲ್ಲದೆ ಬೂದನಿಗೋಸ್ಕರ ಪ್ರತ್ಯೇಕ ರಾಶಿಗುಂಪಿ ಕಣದಲ್ಲಿರುತ್ತದೆ. ಕೆಲವೊಮ್ಮೆ ಇದು ಇರದೆಯೂ ಹೋಗಬಹುದು. ಹೀಗಿದ್ದ ರಾಶಿಯನ್ನು ಕೃಷಿಕ ತನ್ನ ಸ್ವಂತಕ್ಕೆ ಬಳಸುವುದಿಲ್ಲ. ಬದಲಾಗಿ ಯಾವುದಾದರೂ

ಮಠಕ್ಕೆ ಮತ್ತು ಜೋಗಿ ಜಂಗಮ ಆಯಗಾರರಿಗೆ ದಾನಮಾಡಿ ಕೃತಾರ್ಥನಾಗುತ್ತಾನೆ.

ರೈತನ ಫಸಲಿನ ಹೆಚ್ಚಳಿಕೆಗೆ ಬೂದ ಸಹಕರಿಸಿದರೂ ರೈತನ ವಿಡಂಬನೆಗೆ ಹಾಸ್ಯಕ್ಕೆ ಬೂದ ಗುರಿಯಾದದ್ದು ಇದೆ

ಬೂದವ್ವ ನಿಮ್ಮವ್ವ ಬುತ್ತಿಯ ತಂದಾಳೋ
ಯಾಲಕ್ಕಿ ಸೊಂಟಿ ಮರತ ಬಂದಾಳೋ ೨೩

ಎನ್ನುವಲ್ಲಿ ಬೂದ ಸ್ತ್ರೀವಾಚಕವಾಗಿ ಬಳಕೆಯಾಗಿದ್ದಾನೆ. ಸಂಪೂರ್ಣವಾಗಿ ಇಲ್ಲಿ ಬೂದ ಹಾಸ್ಯಕ್ಕೆ ಗುರಿಯಾಗಿದ್ದಾನೆ. ಪಂತಿಹಾಡು ಹಾಡುವಾಗ ಬಾಯಿ ಒಣಗುವಿಕೆಯನ್ನು ಪರಿಹರಿಸಲು ಸುಂಟಿ, ಬೆಲ್ಲ, ಯಾಲಕ್ಕಿ ತಿನ್ನುವುದುಂಟು. ಇದರಿಂದ ಅತಿಯಾದ ಸುಂಕದಿಂದ ಕಟ್ಟಿದ ಗಂಟಲು ಸರಳವಾಗುತ್ತದೆ. ಇದರಿಂದಾಗಿ ಇದೊಂದು ಕೆಲಸಕೇಳುವ ದೇವತೆಯಾಗಿ ಇಲ್ಲಿ ಕಂಡುಬರುತ್ತದೆ.

**೨. ಹುಲುಸು :**

ರಾಶಿ ತುಂಬುವ ಸಂದರ್ಭದಲ್ಲಿ 'ಹುಲ್ಯುಲಿಗ್ಯೊ' ಹುಲಿಗ್ಯೊ ಎಂದು ಉದ್ಗರಿಸುವ ಈ 'ಪದ' (word) ಸಮೃದ್ಧಿಯ ಸಂಕೇತವಾಗಿ ಬಳಕೆಯಾಗುತ್ತದೆ. ಹುಲುಸಿಗೆ ಕೃಷಿ ಬದುಕಲ್ಲಿ ಹೆಚ್ಚಾಗಲಿ ಸಮೃದ್ಧಿಯಾಗಲೀ ಎಂಬರ್ಥವಿದೆ. ಕಿಟೆಲ್‌ಕೋಶದಲ್ಲಿ ಇದೇ ಅರ್ಥವಿದೆ. To Increase in bulk to thrive to growrich ಎಂಬರ್ಥವಿದೆ.

ಮಲೆನಾಡಿನ ಕಣದಲ್ಲಿ ರಾಶಿಹಾಕಿದ ಭತ್ತದ ಗುಡ್ಡೆಗಳಿಗೆ ಹುಲುಸು ಹಾಕುವ ಕ್ರಮವೊಂದು ರೂಢಿಯಲ್ಲಿದೆ. ಕಣದಲ್ಲಿ ಭತ್ತವನ್ನು ರಾಶಿಮಾಡಿದ ಮೇಲೆ ಸ್ನಾನ ಮಾಡಿಕೊಂಡು ಶುಚಿಯಾಗಿ ಬೆರೆಕೆ ಕೋಲು ತೆಗೆದುಕೊಂಡು ಹೋಗಿ ಬೆಮ್ಮರಲು ಗಿಡದ ಎಲೆಗಳನ್ನು ಅದರಸಹಾಯದಿಂದ ಕಿತ್ತುತರುತ್ತಾರೆ. ಈ ಸೊಪ್ಪು ಕೀಳುವಾಗ ಯಾರೊಂದಿಗೂ ಮಾತನಾಡಬಾರದೆಂದೂ ಕೈಯಿಂದ ಮುಟ್ಟಬಾರದೆಂದೂ ಕಟ್ಟುಪಾಡು ಇದೆ. ತಂದ ಸೊಪ್ಪನ್ನು ಭತ್ತದ ರಾಶಿಯೊಂದಿಗೆ ಅದೇ ಕೋಲಿನಿಂದ ಸೇರಿಸಿ ರಾಶಿಯ ಸುತ್ತಲು ಅದೇ ಕೋಲಿನಿಂದ ಗೆರೆವಳೆಯುವ ಪದ್ಧತಿ ಇದೆ ಎನ್ನುವ ಮಾಹಿತಿಯನ್ನು ಶ್ರೀಕಂಠಕೂಡಿಗಿ ಕೊಡುತ್ತಾರೆ. (೪೮;೧೯೮೨)

ಒಟ್ಟು ಹುಲುಸು ಎನ್ನುವುದು ಫಲಸಮೃದ್ಧಿಯ, ಅದೂ ಧನಧಾನ್ಯ ಮನುಷ್ಯ ಸಂಪತ್ತಿನ ಅಭಿವೃದ್ಧಿ ಮತ್ತು ರಕ್ಷಕ ನೆಲೆಯಲ್ಲಿ ಕಾರ್ಯಪ್ರವೃತ್ತವಾಗುವಂತದ್ದು.

**೩. ರ್ಯಾಗೋಲು :**

ಇದಕ್ಕೆ 'ಜಂತಿಗುಂಟಿ' ಎಂದು ಕೂಡ ಕರೆಯುತ್ತಾರೆ. 'ಜಂತಿಗುಂಟಿಲಿ ಎಳೆದು

ನಿಂತಕಣಕದ ರಾಶಿ' ಎನ್ನುವ ನುಡಿಗಳು ರ್‍ಯಾಗೋಲಿನ ಮಹತ್ವವನ್ನು ಕಟ್ಟಿಕೊಡುತ್ತವೆ. ಇದು ಒಂದರಿಂದ ಒಂದುವರೆ ಅಡಿ ಉದ್ದವಾಗಿರುತ್ತದೆ. ಒಂದು ಅಡಿ ಉದ್ದದ ಆರು ಹಲ್ಲುಗಳು, ಐದು ಅಥವಾ ಆರು ಅಡಿ ಉದ್ದದ ಕಾವು ಇದಕ್ಕಿರುತ್ತದೆ. ಇದರ ಸಹಾಯದಿಂದ ತೆನೆ ಎಳೆದು ಕಣಕ್ಕೆ ಹಾಕಬಹುದು. ರಾಶಿಯಿಂದ ಕಂಕಿಯನ್ನು ಸುಲಭವಾಗಿ ಬೇರ್ಪಡಿಸಬಹುದು. ಇದರ ಉದ್ದವಾದ ಹಲ್ಲುಗಳ ರಚನೆ ಸಣ್ಣದಾದ ಕಾಳುಗಳು ಸೋಸಿ ದೊಡ್ಡದಾದ ಕಂಕಿಯನ್ನು ಬೆರೆಸಿ ಹೊರತೆಗೆಯಲು ಅನುಕೂಲವಾಗುತ್ತದೆ. ಸುಲಭವಾಗಿ ಹತ್ತರಿಂದ ಹನ್ನೆರಡು ಅಡಿ ದೂರದ ವಸ್ತುಗಳನ್ನು ಇದರಿಂದ ಎಳೆದು ಗುಂಪಿಹಾಕಬಹುದು. ಎಷ್ಟು ಎಳೆದರೂ ಶ್ರಮ ಎನಿಸುವುದಿಲ್ಲ. ದನಿವು ಎನಿಸುವುದು ಕೂಡ ರ್‍ಯಾಗೋಲಿನ ರಚನೆ ಮತ್ತು ರಚನೆ ಮಾಡುವ ಬಡಿಗನ ಮೇಲೆ ಅವಲಂಬಿತ ವಾಗಿರುತ್ತದೆ. ಒಂದು ಹಾಡಿನಲ್ಲಿ-

ಸಣ್ಣೆಳಿ ರ್‍ಯಾಗೋಲ ಮತ್ತ್ಯಾರ ಕೆತ್ತ್ಯಾರ
ಪಂಚಾಳರ ಹುಡುಗ ಪದುಮಣ್ಣ। ಕೆತ್ತಿದದಿಂಡ
ಕಂಕಿ ಎಳದರ ಧನಿವಿಲ್ಲ[೨೪]

ಎನ್ನುವಲ್ಲಿ ರ್‍ಯಾಗೋಲು ಕೆತ್ತುವುದು ಒಂದು ಕಲೆಯಾಗಿತ್ತು. ಬಡಿಗನ ತಾಂತ್ರಿಕ ಕೌಶಲ್ಯತೆಯ ಪ್ರತಿನಿಧಿಯಾಗಿತ್ತು ಎನ್ನುವುದು ತಿಳಿದು ಬರುತ್ತದೆ. ದಿಂಡಿನ ಮೇಲ್ಮೈ ತುಂಬ ಚಿತ್ತಾರದಿಂದ ಕೂಡಿರುತ್ತದೆ. ಈ ಕುರಿತು ಒಂದ ಹಾಡು ಹೀಗಿದೆ-

ಕಡೆಗೋಲು ಕುಡಗೋಲು ಸೆಡ್ಡಿ ಮಂಡೆಯಕೋಲು
ಬಡಿಗಿ ಬ್ಯಾಕೋಲು ಬಾರ್ಕೋಲು। ಉರ್ಗೋಲು
ಚಿತ್ರಾದ ಕೋಲು ರ್‍ಯಾಗೋಲು
ಚಿತ್ರಾದ ಕೋಲು ರ್‍ಯಾಗೋಲು ಮತ್ತ್ಯಾರ ಮಾಡ್ಯಾರ
ಚಿತ್ತಾರದ ಬಡಿಗಿ ಶೇಷಣ್ಣ ಮಾಡಿರುವ
ಚಿತ್ರ ರ್‍ಯಾಗೋಲು ಎಳೆಲ್ಯಾಗೋ[೨೫]

ಕೃಷಿ ಉಪರಕರಣಗಳನ್ನು, ಅದರ ಬಳಕೆ ಸಾಧ್ಯತೆಗಳನ್ನು, ರಚನಾಕಾರನನ್ನು ತಿಳಿಸಿಕೊಡುವ ಇಂತಹ ಹಂತಿಹಾಡುಗಳು ರಾಶಿಗಟ್ಟಲೇ ಸಿಗುತ್ತವೆ. ಹಂತಿಸಂದರ್ಭದಲ್ಲಿ ರೈತ ತನಗೆ ಸಹಾಯ ಸಲ್ಲಿಸಿದವರನ್ನೆಲ್ಲ ಅವರವರ ಕೆಲಸಗಳ ಮೂಲಕ ಈ ರೀತಿ ಸ್ಮರಿಸುತ್ತಾನೆ. ಅವರಿಗೆ ತನ್ನ ಕೃತಜ್ಞತೆಯನ್ನು ಅರ್ಪಿಸುತ್ತಾನೆ. ಶಿಷ್ಟ ಬದುಕಲ್ಲಿ ಈ ರೀತಿ ಉಪಕೃತತೆ ಬರಲು ಸಾಧ್ಯವೆ? ಜೊತೆಗೆ ಅಂತಹ ಅದ್ಭುತವಾದ ಸುಂದರವಾದ ವಸ್ತುವನ್ನು ಬಳಸಲು ರೈತನ ಮನಸ್ಸು ಹಿಂದೇಟು ಹಾಕುತ್ತದೆ. ಚಿತ್ತಾರದ ಈ ರ್‍ಯಾಗೋಲಿಗೆ ತೊಂದರೆಯಾದೀತೆಂಬ ಕಾಳಜಿ ಇದೆ. ಆತಂಕ ಇದೆ. ಎಷ್ಟು ಜನಕ್ಕೆ ಈ

ಬುದ್ಧಿ ಇದೆ?ರಾಜವೈಭೋಗದ ಕಾಲದಲ್ಲಿ ಬರೆಸಿದ ಎಷ್ಟು ಶಾಸನಗಳಲ್ಲಿ, ಕೃತಿಗಳಲ್ಲಿ ಹೀಗೆ ಕೃತಿಕಾರನನ್ನು ನೆನೆದಿರುವ ಉಲ್ಲೇಖಗಳಿವೆ. ಮಾಡಿದವನಿಗೆ ಎಷ್ಟರ ಮಟ್ಟಿನ ಮನ್ನಣೆ ಸಿಕ್ಕಿದೆ ಎಂಬುದಕ್ಕೆ ಉತ್ತರ ವಿರಳ. ಆದರೆ ಅದೇ ಜನಪದ ಬದುಕಿಗೆ ಬಂದಾಗ ಮನುಷ್ಯನನ್ನು ಎರಡು ಹೋಳುಮಾಡದೆ. `ಆದವರನ್ನು ಆರು ತಾಸು ರಾತ್ರಿಯೊಳಗ ನೆನಿಬೇಕು' ಎನ್ನುವ ಮಾನವೀಯ ಕಳಕಳಿ, ಕೃತಿ ಮಾಡಿದ ಕೃತಿಕಾರನನ್ನು ಸಂತೋಷದಿಂದ ಹಾಡಿಹೊಗಳುತ್ತದೆ.

ಕಲೆಯ ಶೋಷಣೆಗಿಂತ ಕಲಾಪೋಷಣೆ ಇಲ್ಲಿ ಎದ್ದುಕಾಣುತ್ತದೆ. ಕೃಷಿ ಬದುಕು ಸಮುದಾಯ ಕೇಂದ್ರಿತವಾದದ್ದು ಹೀಗಾಗಿ ಇಲ್ಲಿ ವ್ಯಕ್ತಿತ್ವದ ಕಬಳಿಕೆಗಿಂತ ಅದರ ಬೆಳವಣಿಗೆಗೆ ಹೆಚ್ಚು ಒತ್ತು ಬೀಳುತ್ತದೆ. ಕೃತಿ ವೈಯಕ್ತಿಕವಾದುದು ಅದರ ಲಾಭ ಸಮಷ್ಠಿತಿಯದು. ಇಂತಹ ದೊಡ್ಡಗುಣ ಇರುವುದರಿಂದಲೇ ಇಂದಿಗೂ ನಾವು ಜಾನಪದ ಕಲೆಗಳನ್ನಾಗಲೀ ಅದರ ಪರಂಪರೆಯನ್ನಾಗಲೀ ಕಾಣಲು ಸಾಧ್ಯವಾಗಿದೆ. ಆಧುನಿಕ ಮನುಷ್ಯನಂತೆ ಸ್ವಾರ್ಥಿಯಾಗಿ 'ಕಾಣುವ ದೃಷ್ಟಿ'ಯನ್ನು 'ನೋಡುವ ದೃಷ್ಟಿ'ಯನ್ನು ಕಳೆದುಕೊಂಡು ಅಂದಿನ ಜನ ಬದುಕಿದ್ದರೆ ಕಲೆ ಹೇಳಹೆಸರಿಲ್ಲದೆ ನಾಪತ್ತೆಯಾಗಿ ಬಿಡುತಿದ್ದವೆನೋ.

೪. ಸೆಳ್ಳು :

ಉತ್ತರಿಯ ಮಳೆಯಾಗಿ ಉತ್ತಮರು ತಿಳಿಯಾಗಿ
ಉತ್ಪತ್ತಿ ಫಲವು ಘನವಾಗಿ। ಕಣದಾಗ
ಉತ್ರಾಣಿ ಸೆಳ್ಳು ಮೇಲಾಗಿ[೨೬]

ಉತ್ತರಿಮಳೆ ಚೆನ್ನಾಗಿ ಸುರಿದರೆ ಉತ್ರಾಣಿಕಡ್ಡಿಗಳು ಆಳೆತ್ತರ ಬೆಳೆದು ನಿಂತು ನನ್ನನ್ನು ಉಪಯೋಗಿಸು ಎಂದು ಆಹ್ವಾನ ನೀಡುತ್ತದೆ. ಈ ಉತ್ತರಾಣಿ ಕೃಷಿಬದುಕಲ್ಲಿ ಬಹಳ ಕಡೆ ಬಳಕೆಯಾಗುತ್ತದೆ. ಅಲ್ಲದೆ ಅದಕ್ಕೊಂದು ಪಾವಿತ್ರ್ಯತೆ ಇಲ್ಲಿ ಪ್ರಾಪ್ತವಾಗಿದೆ. ಎಲ್ಲರಂತೆ ಕಣದಲ್ಲಿ ಇದೂ ಪೂಜೆಗೊಳ್ಳುತ್ತದೆ.

ಉತ್ರಾಣಿ ಕಡ್ಡಿಯು ಮುಳ್ಳುಮುಳ್ಳಾಗಿ ಒರಟಾಗಿ ಇರುತ್ತದೆ. ಇದರ ಈ ಒರಟುತನ ರಾಶಿಯನ್ನು ತೂರುವಾಗ ಬೀಳುವ ಕಸಕಡ್ಡಿಗಳನ್ನು ಸ್ವಚ್ಛವಾಗಿಸಲು ಸಹಾಯ ಮಾಡುತ್ತದೆ. ಒರಟಾಗಿರುವುದರಿಂದ ಕಡ್ಡಿಯಿಂದ ಕಡ್ಡಿಗೆ ಪೊಳ್ಳಾಗಿರುತ್ತದೆ. ಇದು ಕೇವಲ ಕಸವನ್ನು ಕೊಡವಿ ಕಾಳನ್ನು ಅದೇ ಜಾಗದಲ್ಲಿ ಬಿಡಲು ಸಹಕರಿಸುತ್ತದೆ. ಹೀಗಾಗಿ ರಾಶಿಗಿಂತ ಪೂರ್ವದಲ್ಲೇ ಇದನ್ನು ಕೊಯ್ದು ಒಣಗಿಸಿ ಕಸಬರಿಗೆಯಂತೆ ಹಿಡಿಕಟ್ಟಿ ಇಡುತ್ತಾರೆ.

**೫. ಮೆಟ್ಟನಾಲಿಗಿ :**

ಕಣದಲ್ಲಿ ರಾಶಿ ತೂರುವ ಪ್ರಮುಖ ಸಾಧನ ಇದಾಗಿದೆ. ಇದಕ್ಕೆ ಅಡ್ಡಣಿಗಿ ಆಕಾರದಲ್ಲಿ ಮೂರುಕಾಲುಗಳಿದ್ದು ಮೇಲೆ ಅಗಲವಾದ ಪಳಿ (ಹಲಗೆ) ಇರುತ್ತದೆ. ನಾಲ್ಕರಿಂದ ಐದು ಅಡಿ ಎತ್ತರ ಇರುತ್ತದೆ. ಮೆಟ್ಟನಾಲಿಗಿಯನ್ನು ತ್ರಿವಿಧ ಲಿಂಗಗಳಿಗೆ ಹೋಲಿಸುವುದಿದೆ. ಅದರ ಮೇಲೆ ನಿಂತು ರಾಶಿತೂರುವ ವ್ಯಕ್ತಿ ಪರಮಾತ್ಮ, ತೂರಿದ್ದು ವಚನರಾಶಿ ಈ ರಾಶಿಯನ್ನು ಹಸನುಗೊಳಿಸುವ ಕಕ್ಕಯ್ಯ ಸೆಳ್ಳಾದ ಬಗ್ಗೆ ಗದ್ದಿಗಿಮಠರು ಬರೆಯುತ್ತಾರೆ. (೧೫೫:೧೯೮೬)

**೬. ಹಂತಿಗಣ್ಣಿ :**

ಹಂತಿ ಎತ್ತಿನ ಕೊರಳಿಗೆ ಕಟ್ಟುವ ನಾರಿನ ಹಗ್ಗ. ಇದಕ್ಕೆ 'ಪಿಟ್ಟಲಡ್ಡು' ಎಂದು ಕರೆಯುತ್ತಾರೆ. ಕೆಳಗಿನ ಪದರು ಉದ್ದವಾಗಿದ್ದು (ಹಂತಿ ಎತ್ತಿನ ಸಂಖ್ಯೆಯ ಮೇಲೆ) ಅಲ್ಲಲ್ಲಿ ಚಿಂಪು (ಗುಂಡಿಹಾಕುವ ಕಾಜಿನಂತೆ) ಇರುತ್ತವೆ. ಮೇಲಿನ ಇನ್ನೊಂದು ಪದರನ್ನು ಎತ್ತಿನ ಕೊರಳಿಗೆ ಸುತ್ತಿ ಅದನ್ನು ಈ ಚಿಂಪಿನಲ್ಲಿ ತಂದು ಹಾಕುತ್ತಾರೆ. ಆವಾಗ ಎತ್ತು ಯಾವ ಕಡೆಗೂ ಕೊಸರಾಡದಂತೆ ಹಂತಿ ಎಳೆಯಲು ಅನುಕೂಲವಾಗುತ್ತದೆ. ಬೇಕಾದರೆ 'ಕೊರಳ ಹಗ್ಗ' 'ಜತ್ತಿಗಿ' ಎಂದು ಸರಳವಾಗಿಯೂ ಕರೆಯಬಹುದು. ಹಂತಿಗಣ್ಣಿ ಐದು, ಏಳು, ಹೀಗೆ ಬೆಸಸಂಖ್ಯೆಯ ಹುರಿಗಳಿಂದ ಮುಪ್ಪುರಿಗೊಂಡಿರುತ್ತದೆ.

**ಬಾಬದವರು :**

ಬೂದನಿಗೆ ಬಾಸಿಂಗ ಭೂಮಿ ತಾಯಿಗೆ ದಂಡೆ
ಸಾಲಶರಣರಿಗೆ ಸರಮಾಲೆ ಕಟ್ಟಗೊಂಡು
ಮಾದಯ್ಯ ಗೆದ್ದ ಕೈಲಾಸ[೨೭]

ಎನ್ನುವಲ್ಲಿ ಹೂಗಾರ ಮಾದಯ್ಯನ ಉಲ್ಲೇಖವಿದೆ. ರಾಶಿತುಂಬುವ ಸಂದರ್ಭದಲ್ಲಿ ಮತ್ತು ಹಬ್ಬಹರದಿನ ಹೂ ಪತ್ರಿ ತಂದುಕೊಡುವ ಕಾಯಕದ ಹೂಗಾರನಿಗೂ ಕಣದಲ್ಲಿ ರಾಶಿದಾನಕೊಡಲಾಗುತ್ತದೆ. ವರ್ಷದುದ್ದಕ್ಕೂ ಹೂ ಪತ್ರಿಕೊಡುವ ಇವರಿಗೆ ಹಣದ ರೂಪದಲ್ಲಿ ಯಾವುದೇ ಪ್ರತಿಫಲ ದೊರೆಯುವುದಿಲ್ಲ. ವಸ್ತುವಿನ ರೂಪದಲ್ಲಿ ಫಲ ದೊರೆಯುತ್ತದೆ. ಇದು ಕೃಷಿಬದುಕಿನ ವೈಶಿಷ್ಟ್ಯ. ಯಾಕಂದರೆ ಶ್ರಮಿಕ ವರ್ಗದಲ್ಲಿ ಹಣಕ್ಕಿಂತ ಹೊಟ್ಟೆ, ಬಟ್ಟೆ ಮುಖ್ಯವಾಗಿರುತ್ತದೆ. ಹಾಗೆ ಬಡಿಗ, ಕಂಬಾರ, ಕುಂಬಾರ ನಾದಿಗ, ಜಂಗಮ ಮುಂತಾದ ಆಯಗಾರರಿಗೂ ಇದೇ ತತ್ವ ಅನ್ವಯಿಸುತ್ತದೆ. ವರ್ಷದುದ್ದಕ್ಕೂ ಒಕ್ಕಲಿಗನಿಗೆ ಕೃಷಿ ಉಪಕರಣಗಳನ್ನು ಹಬ್ಬಹರದಿನಗಳನ್ನು ನೆಡೆಸಿಕೊಡುವ ಇವರು ಸುಗ್ಗಿಯ ಈ ಸಂದರ್ಭದಲ್ಲಿ ಅದರ ಫಲವನ್ನು ಪಡೆಯುತ್ತಾರೆ.

ಸ್ವತಃ ರೈತನೇ ಇವರನ್ನು ಕಣಕ್ಕೆ ಆಹ್ವಾನಿಸುತ್ತಾನೆ.

ಬಡಿಗೇರಣ್ಣಾ ಕಣಕಬಾರೋ ಬಣ್ಣದ ರ್ಯಾಗೋಲ ಕಣಕತಾರೋ
ಕುಂಬಾರಣ್ಣ ಕಣಕಬಾರೋ ತುಂಬಿದಕೊಡ ಕಣಕ ತಾರೋ
ಮಾದಿಗರಣ್ಣ ಕಣಕ ಬಾರೋ ಹಂತಿಗಣ್ಣಿ ಹೊತ್ತ ತಾರೋ

ಎಂಬಿತ್ಯಾದಿಯಾಗಿ ಆಯಗಾರರನ್ನು ಕೃಷಿಕ ಕರೆಯುತ್ತಾನೆ. ಇಲ್ಲಿ ಯಾವರೀತಿಯ ಕರಾರುಪತ್ರ ಇರುವುದಿಲ್ಲ. ಪರಸ್ಪರ ತಿಳುವಳಿಕೆ, ಹೊಂದಾಣಿಕೆ, ವಿಶ್ವಾಸದ ಮೇಲೆ ಹೋಗುತ್ತದೆ. ಆದರೆ ಕೆಲವೊಬ್ಬರು ವರ್ಷದುದ್ದಕ್ಕೂ ಇವರನ್ನೆಲ್ಲ ದುಡಿಸಿಕೊಂಡು, ಕೊಡುವುದುಬಂದಾಗ ಜಗಳವಾಡಿ ಕೊಟ್ಟಿದ್ದೇನೆಂದು ಹೇಳುವ ಕೀಳುಮಟ್ಟಕ್ಕೂ ಬರುತ್ತಾರೆ. ಅಲ್ಲದೆ ರಾಶಿತೂರಿ ಮುಂದೆಉಳಿದ ಸೆರಗು ಮುರಗನ್ನು ಕೊಟ್ಟು ಕೃತಾರ್ಥರಾಗುತ್ತಾರೆ.

**ಹೊಲಿಯರು :**

ರೈತನ ವಾರ್ಷಿಕಾವರ್ತನದುದ್ದಕ್ಕೂ ಹೊಲಿಯರ ಕೆಲಸ ತುಂಬ ಮಹತ್ವದ್ದು ಕಟ್ಟಿಗೆ ಒಡೆಯುವ, ಕಟ್ಟಿಗೆ ತಂದು ಹಾಕುವ, ಹೊಲದ ಕಮತಮಾಡುವ, ಹೆಂಡಿಬಳಿಯುವ, ದನಕರ ಮೇಯಿಸುವ, ಮೇವುತರುವ, ಹಗೆಹಡ್ಡುವ, ರಾಶಿಸಂದರ್ಭದಲ್ಲಿ ಇಕ್ಕಲಿ ಒಟ್ಟುವ, ಕಣಿಕೀ ತೆಗೆಯುವ, ಕಣಮಾಡುವ ಹೀಗೆ ಹತ್ತುಹಲವಾರು ಕೆಲಸಗಳಲ್ಲಿ ತನ್ನನ್ನು ಹೊಲಿಯ, ರೈತನ ಮನೆಯಲ್ಲಿ ವರ್ಷದುದ್ದಕ್ಕೂ ತೊಡಗಿಸಿಕೊಳ್ಳುತ್ತಾನೆ.

ಆದರೆ ಇದಕ್ಕೆ ಪ್ರತಿಯಾಗ್ಗಿ ಯಾವುದೇ ರೀತಿಯ ಹಣವನ್ನು ಆತ ಪಡೆದಿರುವುದಿಲ್ಲ. ಬದಲಾಗಿ ಹಬ್ಬಕ್ಕೆ ಹೊಸ ಬಟ್ಟೆ, ಹೊಲಿಸಿ ತಿಂಡಿತಿನಿಸುಕೊಟ್ಟು, ಆತನನ್ನು ಸಂತೃಪ್ತಿಗೊಳಿಸುವುದುಂಟು. ರಾಶಿಯಾದ ಮೇಲೆ ಕಾಳುಕಡಿ ಕೊಡುವುದು ಉಂಟು.

**ಮಾದಿಗ :**

ಸತ್ತ ಎತ್ತಿನ ಎತ್ತಿ ಕುತ್ತಿಗಿ ಕೊಯ್ದು
ಜತ್ತಿಗಿ ಬಾರು ಮಣಿಕಣ್ಣೆ। ಬಸವಣ್ಣ
ಸತ್ತರು ಸುರಲೋಕ ಸಲವ್ಯಾನ೨೯

ವರ್ಷದುದ್ದಕ್ಕೂ ಸಣ್ಣವರಿಂದ ಹಿಡಿದು ದೊಡ್ಡವರವರೆಗೂ ಕಾಲ್ಮರಿ ಹೊಲಿದು ಕೊಡುವ ಹರಿದದ್ದನ್ನು ಹಚ್ಚಿಕೊಡುವ ಕೆಲಸವನ್ನು ಮಾದಿಗರು ಮಾಡುತ್ತಾರೆ. ಹಾಗೆ ಕೃಷಿಕರ್ಮಕ್ಕೆ ಬೇಕಾಗುವ ಮಿಣಿ, ಜತ್ತಿಗಿ, ಬಾರಕೋಲು, ಲಂಬಕಣ್ಣಿ, ಹಂತಿಕಣ್ಣಿ ಇತ್ಯಾದಿಗಳನ್ನು ತೊಗಲಿನಿಂದ ಮಾಡಿ ತಂದುಕೊಡುತ್ತಾರೆ. ಇದೂ ಅಲ್ಲ. ರೈತನ ಮನೆಯಲ್ಲಿ ದನ ಸತ್ತರೆ ಹೊತ್ತೊಯ್ಯುವ, ಎಮ್ಮೆ ಬೋಳಿಸುವ ವಿವಿಧ ಕಾರ್ಯಗಳನ್ನು

ನಿಭಾಯಿಸುತ್ತಾನೆ. ಕೆಲಸಮಾಡಿದ ತತ್‌ಕ್ಷಣದಲ್ಲಿ ಆತನಿಗೆ ಒಂದೆರಡು ರೊಟ್ಟಿ, ಹಬ್ಬಹುಣ್ಣಿವಿಯಲ್ಲಿ ಸಿಹಿಊಟ ಬಟ್ಟೆಬರೆ ಬಿಟ್ಟರೆ ಇನ್ನೇನು ಸಿಗುವುದಿಲ್ಲ ರಾಶಿಯಾದ ಕೂಡಲೆ ಕಣದಲ್ಲಿಯೇ ಆತನಿಗೆ ದಾನರೂಪದದಲ್ಲಿ ಕಾಳು ಕೊಡುತ್ತಾರೆ.

### ೪. ಆಧುನಿಕತೆ ಪರಿಣಾಮಗಳು :

ಇಂತಹ ಒಂದು ಅಖಂಡ ಮತ್ತು ಅದ್ಭುತವಾದ ಜೀವನಾವರ್ತನದ ಚಟುವಟಿಕೆಯ ಮೇಲೆ ಆಧುನಿಕತೆಯ ಗಾಳಿ ಬಲವಾಗಿ ಬೀಸಿದೆ. ಊಳುವವನೆ ಒಡೆಯ ಎನ್ನುವಂತ ಭೂಸುಧಾರಣೆ ಕಾಯ್ದೆಗಳು, ನಗರೀಕರಣದ ಪ್ರಭಾವ, ಆಡಳಿತದ ವಿಕೇಂದ್ರಿಕರಣ, ಸುಧಾರಿತ ಕೃಷಿ ಬೇಸಾಯ ಪದ್ಧತಿಗಳು, ನೀರಾವರಿ ಪಂಪ್‌ಸೆಟ್ಟುಗಳು, ಮಳೆಯ ಅಭಾವ, ಆಧುನಿಕ ಕೃಷಿ ಉಪಕರಣಗಳು, ಔದ್ಯೋಗೀಕರಣ, ವಿದೇಶಿ ಬಂಡವಾಳ ಹೂಡಿಕೆ ಮುಂತಾದ ಸಂಗತಿಗಳು ಈ ಸಮುದಾಯದ ಸಂಸ್ಕೃತಿಯನ್ನು ಛಿದ್ರಗೊಳಿಸಿ ಬಿಟ್ಟಿವೆ. ಈ ರೀತಿ ಬದಲಾಗುತ್ತಿರುವ ಕೃಷಿ ಪರಿಸರವನ್ನು ಕುರಿತು ಡಾ. ಶ್ರೀರಾಮ ಇಟ್ಟಣ್ಣವರ ಮಾತನಾಡುತ್ತಾ, ಯಾವುದೇ ಒಂದು ಉಪಕರಣ ಸಂಪ್ರದಾಯ ಮರೆಯಾದರೆ ಆನುಷಂಗಿಕವಾಗಿ ಅದರ ಪರಿಣಾಮ ವಿವಿಧ ಹಂತಗಳಲ್ಲಿ ನಾನಾಬಗೆಯಾಗಿರುತ್ತದೆ. ಹಂತಿಹೋದದ್ದರಿಂದ ರ್‍ಯಾಗೋಲು, ಗ್ಯಾರಿ, ಹಂತಿಕಣ್ಣಿ ಮುಂತಾದ ಉಪಕರಣಗಳು ಇಂದು ಮರೆಯಾಗುತ್ತಿವೆ. ಹಂತಿಹೋದದ್ದರಿಂದ 'ಹುಲಗಣ' ಹರಿಯುವ ಸಂಪ್ರದಾಯ ಇಂದು ಇಲ್ಲ. ರಾಶಿಬಾನ ಎಲ್ಲಿ ಹಿಡಿಯುವದು. ಹೀಗೆ ಒಂದು ಉಪಕರಣ ಒಂದು ಸಂಪ್ರದಾಯ ಒಂದು ಆಚರಣೆ ಮರೆಯಾಗುವುದರ ಬೆನ್ನ ಹಿಂದೆಯೇ ಉಂಟಾಗುವ ಬದಲಾವಣೆಗಳು ತರ್ಕಬದ್ಧವಾಗಿರುತ್ತವೆ. (೨;೯೯೫೫) ಎನ್ನುವ ಮಾತು ಗಮನಾರ್ಹ ವಾದದ್ದು.

ಹಂತಿಯೇ ಪ್ರಧಾನವಾಗಿದ್ದ ಕಾಲ ಹಿಂದೆ ಸರಿದು ರೂಲರ್ (Roller) ಟಾರ್ ರೋಡಗಳಲ್ಲಿ ಹಾಕಿ ರಾಶಿ ಮಾಡುವುದು, ರಾಶಿಯ ಮಷಿನ್ನಿನ ಬಳಕೆಗಳು ಹಂತಿಗಿದ್ದ ಸಂಕೀರ್ಣತೆಯನ್ನು, ಶ್ರಮವನ್ನು ಜೊತೆಗೆ ಆಚರಣೆಗಳನ್ನೂ, ಮೊಟಕುಗೊಳಿಸಿ ಬಿಟ್ಟಿವೆ. ರಾಶಿಮಷಿನ್ನಿನ ಬಳಕೆಯಂತೂ ಸಂಪೂರ್ಣವಾಗಿ ರೈತನ ಶ್ರಮವನ್ನು ಕಡಿಮೆ ಮಾಡಿದೆ. ಬೆಳಿಗ್ಗೆ ತೆನೆ ಮುರಿದರೆ (ತೆನೆ ಕೊಯ್ಯುವ ಮಷಿನ್ನು ಬಂದಿದೆ) ಸಂಜೆಗೆ ರಾಶಿ ಸ್ವಚ್ಛವಾಗಿ ಮನೆಗೆ ಬಂದು ಬೀಳುತ್ತದೆ.

ಸುಧಾರಣ ಮಾಧ್ಯಮವಾಗಿ ಮೊದಲಿಗೆ ಬಳಕೆಯಾಗಿದ್ದು ಕಲ್ಲಿನ 'ರೂಳು'. ಸುಮಾರು ಒಂದು ಟನ್ನು ಒಂದೂವರೆ ಟನ್ನು ಬಾರವಿರುವ ಇದನ್ನು ಎರಡೆತ್ತಿನಿಂದ ನಡೆಸಬಹುದು. ಈ ರೂಳು ಕುರಿತ ವಿವರಗಳನ್ನು ಬಿ. ಎನ್. ಸತ್ಯನ್ ಅವರು ಪ್ರಕಟಿಸಿರುವ ಚಿತ್ರದುರ್ಗ

ಜಿಲ್ಲಾ ಗೆಝೆಟಿಯರ್‌ನಲ್ಲಿ ಕಾಣಬಹುದು.

About 1918, the stone roller about 21/2 feet long and about 13/4 feet in diameter fetted with an axle and a frame work, was Intruduced (p;137:1997)

ಈ ಬಗೆಯ ರೂಳಿನ ಬಳಕೆ ರಾಶಿ ಸಂದರ್ಭದಲ್ಲಿ ನೂರಾರು ಎತ್ತುಗಳನ್ನು ಕಲೆಹಾಕುವ ಬಹುದೊಡ್ಡ ಶ್ರಮವನ್ನು ಉಳಿಸಿತು. ಜೊತೆಗೆ ಕಣದಲ್ಲಿ ಹಂತಿಗೆ ಬೇಕಾಗುವ ಜನಸಂಖ್ಯೆಯನ್ನು ಕಡಿಮೆಗೊಳಿಸಿತು. ಕಣದ ಪ್ರಯುಕ್ತ ನಡೆಯುವ ಹಲವಾರು ಆಚರಣೆಗಳು ಕುಂಠಿತಗೊಂಡವು. ಮೇಟಿ ಕಂಬ ಇಲ್ಲವಾಯಿತು. ಇದ್ದರೂ ಅದು ಕೇವಲ ಸಂಕೇತದಂತೆ ಬಳಕೆಯಾಗಹತ್ತಿತ್ತು. ಕಣದ ಮೇಟಿಗೆ ಬಂಧಿತವಾಗಿ ಇಂಡಿಯೊಳಗೆ (ಸರ್ಕಲ್) ಯಾಂತ್ರಿಕವಾಗಿ ತಿರುಗುತ್ತಿದ್ದ ಸ್ಥಿತಿ ಈಗ ಪಲ್ಲಟವಾಯಿತು. ಇದರಿಂದ ಉದ್ಯೋಗಗಳು ಪಲ್ಲಟಗೊಂಡವು. ಮಾಲೀಕನ ಹಂಗಿಗೆ ಒಳಗಾಗಿ ರಾಶಿ ಮುಗಿಯು ವವರೆಗೂ ಕಣದಲ್ಲೇ ಸಾಯುವಂತ ಸ್ಥಿತಿ ತಪ್ಪಿತು. ಒಂದು ಎರಡು ದಿನದಲ್ಲಿ ರಾಶಿಯನ್ನು ಮನೆಗೆ ತಂದು ಹಾಕಿ ಆರಾಮವಾಗಿರುವ ಸ್ಥಿತಿ ನಿರ್ಮಾಣವಾಯಿತು. ಒಟ್ಟು ಒಂದು ಬದ್ಧ ವ್ಯವಸ್ಥೆಯ ಪಲ್ಲಟವನ್ನು ಇಲ್ಲಿ ಕಾಣಬಹುದು.

ಹಾಗೆ ನಗರೀಕರಣ ಪ್ರಭಾವದಿಂದ ಆದಂತ ಇನ್ನೊಂದು ಲಾಭವೆಂದರೆ ಹಳ್ಳಿಹಳ್ಳಿಗೂ ಡಾಂಬರ ರಸ್ತೆಗಳಾದದ್ದು. ರಾಶಿಯನ್ನು ಇನ್ನೂ ಸರಳೀಕರಣಗೊಳಿಸಲು ಕಾರಣಗಳಾದವು. ಟಾರ್ ರಸ್ತೆಯಲ್ಲಿ ಸಂಪೂರ್ಣವಾಗಿ ಅಂದರೆ ಹಂತಿ ವಿಷಯದಲ್ಲಿ ರಾಶಿಯ ವಿಷಯದಲ್ಲಿ ಎತ್ತಿಗೆ ಶ್ರಮವಿಲ್ಲದಾಯಿತು. ಮನುಷ್ಯ ಶ್ರಮ ಮುಖ್ಯವಾಯಿತು. ಬೆಳಿಗ್ಗೆ ತೆನೆ ತಂದು ಹಾಕಿ ರಾತ್ರಿಯಿಡೀ ತೂರಿ ಮರುದಿನ ರಾಶಿಯನ್ನು ಮನೆಗೆ ಒಯ್ಯುವ ಸುಲಭ ವ್ಯವಸ್ಥೆಯನ್ನು ಡಾಂಬರೀಕರಣ ಕಲ್ಪಿಸಿತು. ಆದರೆ ರೂಳು ರಾಶಿಗಿಂತ ಇದರಲ್ಲಿ ವ್ಯತ್ಯಯಗಳು ಜಾಸ್ತಿಯಾದವು. ಮೊದಲಿನ ಸರ್ಕಲ್ ರಾಶಿಯಿಂದ ರೇಖಾತ್ಮಕ ವಿಧಾನಕ್ಕೆ ಪರಿವರ್ತಿತವಾದಂತೆನಿಸಿದರೂ ಬಸ್ಸುಗಳ ಅನಾನುಕೂಲ, ಕಡಿಮೆ ಬಸ್ಸುಗಳ ತಿರುಗಾಟ ಗಾಳಿಯ ಅಭಾವ ಇಲ್ಲಿ ಎದ್ದು ಕಾಣುವಂತಾಯಿತು. ಕಣಮಾಡುವ, ಸಾರಿಸುವ ಮನುಷ್ಯ ಮತ್ತು ಎತ್ತಿನ ಶ್ರಮಗಳು ಬಹಳ ಕಡಿಮೆಯಾದವು. ರಾಸಿಬುತ್ತಿಯಗೊಂದಲವಿಲ್ಲ. ಒಟ್ಟು ಮೊಟಕುಗೊಂಡ ಆಚರಣೆಗಳನ್ನು ಇಲ್ಲಿ ಕಾಣಬಹುದು.

ಈಗಂತೂ ರಾಶಿ ಯಂತ್ರ ಮತ್ತು ಕಟಾವು ಮಾಡುವ ಯಂತ್ರಗಳಿಂದಾಗಿ ಎಲ್ಲವೂ ಸುಲಭ ಮತ್ತು ಯಾಂತ್ರೀಕೃತವಾಗಿ ಬಿಟ್ಟಿದೆ. ತೆನೆಹೊರುವ, ಆಳು ಕೂಡಿಸುವ, ಕಣ ಮಾಡುವ ದೊಡ್ಡ ಕೆಲಸಗಳೇ ಇಲ್ಲ. ರಾಶಿ ಮಾಡಬೇಕೆಂದರೆ ಸೀದಾ ಮುರಿಯುವ ಮತ್ತು ಅರೆಯುವ ಯಂತ್ರಗಳನ್ನು ಹೊಲಕ್ಕೆ ಒಯ್ದು ಮೂರು ದಿನದ ರಾಶಿಗಳನ್ನು

ದಿನದಲ್ಲೇ ಮನೆಗೆ ತರುತ್ತಾರೆ. ರೂಳು ಮತ್ತು ಡಾಂಬರ ರಸ್ತೆ ರಾಶಿಗಳಿಗಿಂತ ಇದು ಹೆಚ್ಚು ಸುಲಭ. ಮೊದಲ ಮೂರು ರೀತಿಯ ರಾಶಿಗಳಲ್ಲಿ ಗಾಳಿ ಬಸ್ಸು ಎತ್ತುಗಳಂತಹ ಪರವಸ್ತುಗಳ ಮೇಲೆ ಅವಲಂಬಿಸಬೇಕಿತ್ತು. ಗಾಳಿಬಿಟ್ಟಾಗ ತೂರಿಕೊ ಎನ್ನುವ ತತ್ವ ಇತ್ತು. ಯಂತ್ರ ರಾಶಿಯಲ್ಲಿ ಇವಾವುದಕ್ಕೂ ಕಾಯಬೇಕಿಲ್ಲ. ಇಲ್ಲಿ ತೆನೆ ಅರೆಯುವ ಕಾಳು ಬೇರ್ಪಡುವ ಕೆಲಸ ಏಕಕಾಲಕ್ಕೆ ನಡೆದು ಹೋಗುತ್ತದೆ. ನೇರವಾಗಿ ಚೀಲ ತುಂಬಿಸುವುದು ಮಾತ್ರ. ಹಾಡುವ, ರಾತ್ರಿಕಳೆಯುವ ಯಾವುದೇ ಜಂಜಾಟಗಳಿಲ್ಲ. ತುಂಬ ಸರಳ. ಆಚರಣೆಗಳ ಕಿರುಕುಳವಿಲ್ಲ. ಎಲ್ಲವೂ ಯಾಂತ್ರೀಕೃತ.

ಈ ವಿಧವಾದ ಆಧುನಿಕತೆಯಿಂದ ಕೃಷಿ ಬದುಕಲ್ಲಿ ಆದ ದೊಡ್ಡ ಹಾನಿ ಎಂದರೆ. ಜನಪದ ಬದುಕಿಗೆ ಮೂಲ ಅಸ್ತಿತ್ವವಾದ ನಂಬಿಕೆಯ ಪಲ್ಲಟ. ಕೃಷಿ ಬದುಕು ನಂಬಿಕೆ, ವಿಶ್ವಾಸದ ಮೇಲೆ ರಚನೀಕರಣಗೊಂಡದ್ದು. ಅದರಲ್ಲಿ ಮಾನಸಿಕ ಒಪ್ಪಂದಗಳು ಬಹುಮುಖ್ಯ ಹೊರತು ಬರಹ ರೂಪದ ಕರಾರು ಪತ್ರಗಳಲ್ಲ. ಈ ನಂಬಿಕೆ ಕೃಷಿ ಬದುಕಿನ ಆರ್ಥಿಕ ಧಾರ್ಮಿಕ ಇತ್ಯಾದಿ ಅಪೇಕ್ಷೆಗಳನ್ನು ಮತ್ತು ಬದುಕಿಗೊಂದು ಗಟ್ಟಿತನವನ್ನು ಒದಗಿಸಿದ್ದು ಕಂಡುಬರುತ್ತದೆ. ಆಧುನಿಕತೆ ಇದಕ್ಕೆ ಕೊಡಲಿಯೇಟು ಕೊಟ್ಟಿದೆ. ಇದರಿಂದ ರೈತನನ್ನೇ ನಂಬಿ ಬದುಕುತ್ತಿದ್ದ ಆಯಗಾರರು, ಹೊಲೆಮಾದಿಗರು ಚಿಂತಾಜನಕ ಸ್ಥಿತಿಗೆ ತಲುಪಿದ್ದಾರೆ. ತನ್ನ ಅನ್ನಕ್ಕಾಗಿ ಪರದಾಡುವ ಕೆಟ್ಟ ಸ್ಥಿತಿ ಬಂದಿದೆ. ಕಾಲದಿಂದಲೂ ದಾಸ್ಯಜೀವನವನ್ನೇ ನಂಬಿ ಅದರಲ್ಲೇ ಸುಖವುಂಡ ಹಳೆತಲೆಮಾರಿನವರಿಗೆ ಈ ಪ್ರಕ್ರಿಯೆ ಹೇಶಿಗೆ ತಂದಿದೆ. ಹೊಸದಕ್ಕೆ ಹೊಂದಲಾಗದ ಹಳೆಯದಕ್ಕೆ ದೂರವಾಗದ ದ್ವಂದ್ವದಲ್ಲಿ ಒದ್ದಾಡುತ್ತಿದ್ದಾರೆ. ಎಷ್ಟೋ ಕುಟುಂಬಗಳು ಗುಳೇ ಹೋಗಿವೆ ಹೋದವರಲ್ಲಿ ಹೊಸ ತಲೆಮಾರಿನವರೆ ಜಾಸ್ತಿ. ಪಟ್ಟಣಗಳಲ್ಲಿ ಬದುಕುತ್ತಿರುವ ಇವರು ಊರಿನಲ್ಲಿರುವ ತಮ್ಮ ತಂದೆತಾಯಿಗಳ ಬದುಕಿಗೆ ಹಣ ಕಳಿಸುವುದುಂಟು. ಆದರೂ ಅದರಲ್ಲಿ ಸುಖಕಾಣದೆ ಹಳೆಯ ಭ್ರಮೆಯಲ್ಲಿ ಕೊರಗುತ್ತಿರುವ ಕುಟುಂಬಗಳನ್ನು ಹಳ್ಳಿಗಳ ಅಧ್ಯಯನದಿಂದ ಗ್ರಹಿಸಬಹುದು. ಕೃಷಿಬದುಕಿನೊಂದಿಗಿನ ಅವರ ಗಾಢವಾದ ಭಾವನಾತ್ಮಕ ಸಂಬಂಧ ಇದಕ್ಕೆ ಕಾರಣ. ಬಹುಶಃ ಕಾಲಗತಿಸಿದಂತೆ ಹೊಸದಕ್ಕೆ ಇವರೆಲ್ಲ ಹೊಂದಿಕೊಳ್ಳಬಹುದು. ಅದು ಅನಿವಾರ್ಯ ಕೂಡ, ಕಾಲದೊಂದಿಗೆ ಹೆಜ್ಜೆ ಹಾಕುವ ಪ್ರತಿಯೊಂದು ವಸ್ತುವು ಹೊಸತನವನ್ನು ಪಡೆಯುವುದರ ಮೂಲಕ ಮುಂದುವರೆಯುತ್ತದೆ. ಆ ಗುಣವಿಲ್ಲದ್ದು ನಾಶವಾಗುತ್ತದೆ. ಅದನ್ನು ತಡೆಯಲಾಗುವುದಿಲ್ಲ.

ದೈವ ದೇವರ ಹಂತಿ ಭಾವದೊಳಗ ನಮ್ಮಂತಿ
ತೇದುಂಡ ಹಂತಿ ನಮಬಾಳು। ಒಕ್ಕಲಿಗ
ಕೋದ ತೆನಿಹಂತಿ ಜನಮಕೋ[೩೦]

## ಅಡಿ ಟಿಪ್ಪಣಿಗಳು

೧. ಹಾಡಿದವರು ಮಹಾದೇವ ರಾಂಪೂರ (ಬೆಣ್ಣೂರು) ವಯಸ್ಸು ೩೫
೨. ಈ ವಿಷಯ ತಿಳಿಸಿದವರು ಲಕ್ಕಪ್ಪ ತಳವಾರ (ಬೆಣ್ಣೂರು) ವಯಸ್ಸು ೮೦
೩. ಹಾಡಿದವರು ಮಹಾದೇವ ರಾಂಪೂರ (ಬೆಣ್ಣೂರು) ವಯಸ್ಸು ೩೫
೪,೫ ಹಾಡಿದವರು ಚನ್ನಪ್ಪ ಚೆಲುವಾದಿ (ತಾಂಡ) ವಯಸ್ಸು ೯೦
೬. ಗದ್ದಿಗಿ ಮಠ ಬಿ. ಎಸ್. ಕನ್ನಡ ಜಾನಪದ ಗೀತೆಗಳು ಪುಟ ೨೨೦;೧೯೮೬
೭. ಗದ್ದಿಗಿ ಮಠ ಬಿ. ಎಸ್. ಕನ್ನಡ ಜಾನಪದ ಗೀತೆಗಳು ಪುಟ ೨೨೧;೧೯೮೬
೮. ಡಾ. ವೀರೇಶ ಬಡಿಗೇರ
೯. ಗದ್ದಿಗಿ ಮಠ ಪುಟ ೨೨೧;೧೯೮೬
೧೦. ಕಲಬುರ್ಗಿ ಎಂ.ಎಂ. ಉತ್ತರಕರ್ನಾಟಕದ ಜನಪದ ಪದ್ಯಸಾಹಿತ್ಯ ಪುಟ ೬೦;೧೯೭೮
೧೧. ಗದ್ದಿಗಿ ಮಠ ಬಿ. ಎಸ್. ಪುಟ ೩೪; ೧೯೮೬
೧೨. ಹೇಳಿದವರು ಶೇಷಪ್ಪ ಬಡಿಗೇರ ವಯಸ್ಸು ೬೫
೧೩. ಡಾ. ವೀರೇಶ ಬಡಿಗೇರ
೧೪. ಕಲಬುರ್ಗಿ ಎಂ.ಎಂ. ಪುಟ ೫೯;೧೯೭೮
೧೫. ಗೌಡರ ಎಸ್. ಆರ್. 'ಹಂತಿ ಪದಗಳ ಸೊಗಸು' ಪುಟ ೫೨;೧೯೮೩
೧೬. ಗದ್ದಿಗಿ ಮಠ ಬಿ. ಎಸ್. ಪುಟ ೧೪೩;೧೯೮೬
೧೭,೧೮,೧೯ ಅದೇ ; ೧೪೫ ; ೧೯೮೬
೨೦. ತುಳುಸಾಬಾಯಿ ಬಡಿಗೇರ (ಬೆಣ್ಣೂರು) ವಯಸ್ಸು ೫೦
೨೧. ಗದ್ದಿಗಿ ಮಠ ಬಿ. ಎಸ್. ೧೪೪ ;೧೯೮೬
೨೨. ಗದ್ದಿಗಿ ಮಠ ಬಿ. ಎಸ್. ೧೪೧;೧೯೮೬
೨೩. ಎಲ್ಲಪ್ಪ ಚೆಲುವಾದಿ (ಬೆಣ್ಣೂರು) ವಯಸ್ಸು ೭೫
೨೪. ಶೇಖರಪ್ಪ ಬಡಿಗೇರ (ಬೆಣ್ಣೂರು) ವಯಸ್ಸು ೫೨
೨೫. ನಾಗಪ್ಪ ಬಿದರಿ (ಬೆಣ್ಣೂರು) ವಯಸ್ಸು ೩೫
೨೬. ಲಕ್ಕಪ್ಪ ಬಾರಕೇರ (ಮುಗಳೊಳ್ಳಿ) ವಯಸ್ಸು ೪೦
೨೭. ಗದ್ದಿಗಿ ಮಠ ಬಿ. ಎಸ್. ೧೪೧ ; ೧೯೮೬
೨೮. ಸಿದ್ದಪ್ಪ ದೊರಿ (ಬೇನಾಳ) ವಯಸ್ಸು ೨೪
೨೯. ಗಿರಿಯಪ್ಪ ಚೆಲುವಾದಿ (ಬೆಣ್ಣೂರು) ವಯಸ್ಸು ೩೫
೩೦. ಗದ್ದಿಗಿ ಮಠ ಬಿ. ಎಸ್. ೩೫; ೧೯೮೬

## ಪರಾಮರ್ಶನ ಗ್ರಂಥಗಳು

೧. ಈಶ್ವರಪ್ಪ ಎಂ. ಜಿ. (ಡಾ) ೧೯೯೫; `ಚಿತ್ರದುರ್ಗ ಜಿಲ್ಲೆಯ ವ್ಯವಸಾಯ ಜಾನಪದ' ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೨. ಕಲಬುರ್ಗಿ ಎಂ.ಎಂ. ; ೧೯೭೮; `ಉತ್ತರ ಕರ್ನಾಟಕದ ಜನಪದ ಪದ್ಯಸಾಹಿತ್ಯ' ಸಮಾಜ ಪುಸ್ತಕಾಲಯ, ಧಾರವಾಡ

೩. ಗದ್ದಿಗಿ ಮಠ ಬಿ. ಎಸ್. ೧೯೮೬ ; `ಕನ್ನಡ ಜಾನಪದ ಗೀತೆಗಳು' ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೪. ಗೌಡರ ಎಸ್. ಆರ್. ೧೯೮೩ ; `ಹಂತಿ ಪದಗಳ ಸೊಗಸು' (ಉಪನ್ಯಾಸ ಗ್ರಂಥಮಾಲೆ) ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೫. ಶ್ರೀಕಂಠ ಕೂಡಿಗಿ ೧೯೮೨; ಭೂಮಿ ಹುಣ್ಣಿವಿ; ದಖಿನ್ ಪಬ್ಲಿಕೇಷನ್ಸ್ ಡಿಸ್ಟ್ರಿಬ್ಯೂಟರ್ಸ್, ಬೆಂಗಳೂರು

೬. ಶ್ರೀರಾಮ ಇಟ್ಟಣ್ಣವರ (ಡಾ) ೧೯೯೫; `ಹಲಗಲಿ ಗ್ರಾಮ ಜಾನಪದ' ವೀರಶೈವ ಅಧ್ಯಯನ ಅಕಾಡೆಮಿ, ನಾಗನೂರು, ರುದ್ರಾಕ್ಷಿಮಠ, ಬೆಳಗಾವಿ

೭. Srisattyan, B.N. (ed) 1967 ; *Chitradurga District Gazetteer.*

೮. Frazar ; *Golden Bough* 1995 ; Part V.Vo. 1 Pp. 94-96

# ಮಂಟಪಮಾಲೆ

## ೨೭

ಹಂಪಿಯ ಕನ್ನಡ ವಿಶ್ವವಿದ್ಯಾಲಯ ವಿದ್ಯೆಯನ್ನು ಕಲಿಯಲು ಅನುವು ಮಾಡಿಕೊಡುವ ಒಂದು ಸಂಸ್ಥೆಯೇ ಹೊರತು ಅದು ವಿದ್ಯೆಯನ್ನು ಕಲಿಸುವ ಸಂಸ್ಥೆಯಲ್ಲ. ನಮ್ಮ ನಾಡಿನಲ್ಲಿ ಹಳೆಯ ಕಾಲದ ತಿಳುವಳಿಕೆಯೊಂದಿದೆ. ಅಲ್ಲದೆ ಪಶ್ಚಿಮದಿಂದ ಹರಿದು ಬರುತ್ತಿರುವ ಜ್ಞಾನ ಪ್ರವಾಹವೂ ಇದೆ. ಈ ಎರಡೂ ತಿಳುವಳಿಕೆಗಳು ಒಂದಕ್ಕೊಂದು ಸಂಧಿಸಿ ಬೆಳಕನ್ನು ಉಂಟು ಮಾಡಿವೆ. ಜೊತೆಗೆ ದಿಗ್ಭ್ರಮೆಯನ್ನೂ ತಂದಿವೆ. ಈ ತಿಳುವಳಿಕೆಗಳ ವಿವೇಕದ ವಿನಿಯೋಗ ಇಂದು ಅಗತ್ಯವಾಗಿದೆ. ಇಂಥ ವಿನಿಯೋಗಕ್ಕಾಗಿ ಹೊಸ ಬಗೆಯ ಶಾಸ್ತ್ರ ವಿಧಾನಗಳು ನಮಗಿಂದು ಬೇಕಾಗಿವೆ. ಕನ್ನಡ ವಿಶ್ವವಿದ್ಯಾಲಯದಲ್ಲಿ ನಡೆಯುತ್ತಿರುವ ಸಂಶೋಧನೆಯ ಗುರಿಯೆಂದರೆ ಈ ಶಾಸ್ತ್ರ ವಿಧಾನಗಳ ನಿರ್ಮಾಣ.

ನಾವು ನಮ್ಮ ನಮ್ಮಲ್ಲಿ ವಿಚಾರ ವಿನಿಮಯ ನಡೆಸಲು, ಒಬ್ಬರ ಅರಿವನ್ನು ಎಲ್ಲರೂ ಹಂಚಿಕೊಳ್ಳಲು ವಿಶ್ವವಿದ್ಯಾಲಯದಲ್ಲಿ ಪ್ರತಿವಾರ ಮಂಟಪ ಎಂಬ ಕಾರ್ಯಕ್ರಮ ನಡೆಸುತ್ತೇವೆ. ಅಲ್ಲಿ ಹೊಮ್ಮಿದ ವಿಚಾರಗಳು ನಮ್ಮ ಅರಿವನ್ನು ಹೆಚ್ಚಿಸಿದಂತೆ ನಿಮಗೂ ಲಾಭದಾಯಕ ವಾಗುವವೆಂಬ ನಂಬಿಕೆಯಿಂದ ಕಡಿಮೆ ಬೆಲೆಯ ಕಿರು ಪುಸ್ತಿಕೆಗಳ ರೂಪದಲ್ಲಿ ಅವನ್ನು ಪ್ರಕಟಿಸಿ ನಿಮ್ಮ ಕೈಗಿಡುತ್ತಿದ್ದೇವೆ.

ಡಾ. ಚಂದ್ರಶೇಖರ ಕಂಬಾರ
ಕುಲಪತಿಯವರು

ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ